# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ          ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240   ಸಂಪುಟ : 2   ಸಂಚಿಕೆ : 18   ಸಪ್ಟೆಂಬರ್ 15 ರಿಂದ 30-1998   ಪುಟಗಳು : 24   ರೂ. 5



Mr. Justice R.S. Sarkaria presenting the Bhatia memorial award to Mr. Raj Chengappa of 'India Today' in New Delhi on 11-8 1998.

(ವಿವರ : ಒಳಪುಟಗಳಲ್ಲಿ)

"ದಿ ಪ್ರೇಮ್ ಭಾಟಿಯಾ ಅವಾರ್ಡ್" ಸ್ವೀಕರಿಸುತ್ತಿರುವ
ಶ್ರೀ ಬಡ್ಡನ ರಾಜ್ ಚೆಂಗಪ್ಪನವರು.




# ಅರೆಭಾಷೆ ಗೌಡರಿಗೊಂದು ಸುವಾರ್ತೆ

**21**ನೇ ಶತಮಾನದತ್ತ ದಾಪುಗಾಲು ಹಾಕುತ್ತಿರುವ ನಮ್ಮ ಅರೆಭಾಷೆ ಗೌಡರು ಎಚ್ಚೆತ್ತು, ಬೆಂಗಳೂರಿನಲ್ಲಿಂದು ಹಿರಿಯರ ಮತ್ತು ಗೌಡ ಯುವಕ ಸಂಘದ ಪ್ರಯತ್ನದಿಂದ ಇದೇ ಪ್ರಥಮ ಬಾರಿಗೆ ವಿಶೇಷವಾಗಿ **ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಸಮಾಜ** ಹಾಗೂ **ಕೊಡಗು ಗೌಡ ಸಮಾಜದ ಸಂಯುಕ್ತ** ಆಶ್ರಯದಲ್ಲಿ ವಿಶೇಷ ಸೇರ್ಪಡೆ ಯೊಂದಿಗೆ **"ವಾರ್ಷಿಕ ಕ್ರೀಡಾ ಕೂಟವೊಂದು"** ನಡೆಯಲಿರುವುದು ಶ್ಲಾಘನೀಯ. ಈ ಸುವರ್ಣಾವಕಾಶವನ್ನು ಸದುಪಯೋಗ ಪಡಿಸಿಕೊಂಡು ತಮ್ಮ ತಮ್ಮ ಪ್ರತಿಭೆಗಳನ್ನು ಪ್ರದರ್ಶಿಸಿ ಕೊಳ್ಳಬೇಕೆಂದು ಯುವಶಕ್ತಿಗಳಿಗೊಂದು ಮಹಾಜನತೆಯ ಪರವಾಗಿ ಕರೆ.

**ಗೌಡ ಯುವಕ ಸಂಘ, ವಾರ್ಷಿಕ ಕ್ರೀಡಾಕೂಟ, ಬೆಂಗಳೂರು**
**C/o ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ**
**ಗಂಗಾನಗರ, ಬೆಂಗಳೂರು-32.**

## : : ಉದ್ಘಾಟನೆ : :

**ದಿನಾಂಕ : 1-10-1998** ಸಮಯ ಬೆಳಿಗ್ಗೆ **8** ಘಂಟೆಗೆ

**ಸ್ಥಳ :** ಬಿ. ಇ. ಎಲ್. ಅಂಬೇಡ್ಕರ್ ಕ್ರೀಡಾಂಗಣ, ಜಾಲಹಳ್ಳಿ, ಬೆಂಗಳೂರು.

**ಉದ್ಘಾಟಕರು : ಶ್ರೀ ಕೆ. ಶ್ರೀಧರಗೌಡ** (ಏಕಲವ್ಯ ಪ್ರಶಸ್ತಿ ವಿಜೇತರು)

**ದಿನಾಂಕ : 1-10-98** ಮತ್ತು **2-10-98**ಕ್ಕೆ ಸುಮಾರು **50** ಬಗೆಯ ವಿವಿಧ ಕ್ರೀಡಾ ಸ್ಪರ್ಧೆಗಳನ್ನು ಏರ್ಪಡಿಸಲಾಗಿದೆ. ಹಾಗೂ

**ದಿನಾಂಕ : 27-9-98**ಕ್ಕೆ ಸಾಂಸ್ಕೃತಿಕ ಚಟುವಟಿಕೆಗಳ ಸ್ಪರ್ಧೆಗಳನ್ನು ಏರ್ಪಡಿಸಲಾಗಿದೆ. ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ), ಬೆಂಗಳೂರು. ಇವರ ಆಶ್ರಯದಲ್ಲಿ

**ದಿನಾಂಕ : 11-10-98**ಕ್ಕೆ ವಾರ್ಷಿಕ ಮಹಾಸಭೆ ಮತ್ತು ಕೈಲ್ ಮುಹೂರ್ತ ಹಬ್ಬದ ಸಮಾರಂಭ ಏರ್ಪಡಿಸಲಾಗಿದೆ.

**ಸರ್ವ ಅರೆಭಾಷೆ ಗೌಡರಿಗೆ ಆದರದ ಸ್ವಾಗತ**




# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
180/ಎ, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು–12.
ಫೋನ್ : **516771**

**ಮಡಿಕೇರಿಯ ನಮ್ಮ ವಿಳಾಸ**

**ಕೊಡಗು ಸಂಗಾತಿ**
C/o ನಂಗಾರ್ ಆಡಿಯೋ ವೀಡಿಯೊ
ಕೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ–571 201

## ಒಳನೋಟ

ಪುಟಗಳು



### ಅರೆ ಭಾಷಿಕ ವಿಭಾಗ



### ಚಂದಾ ವಿವರ

| | | |
|---|---|---|
| **ಬಿಡಿ ಪ್ರತಿ** | : | **5 ರೂ.** |
| **ಅರ್ಧ ವಾರ್ಷಿಕ** | : | **60 ರೂ.** |
| **ವಾರ್ಷಿಕ ಚಂದಾ** | : | **120 ರೂ.** |

# ಸಂಪಾದಕೀಯ

### ಭಾವೈಕ್ಯತೆ

ಪ್ರಾಣಿ ಪಕ್ಷಿಗಳಲ್ಲಿ ಒಂದು ಗುಂಪಾಗಿ ವಾಸಿಸುವುದು ಅವುಗಳ ಭಾವೈಕ್ಯತೆಯನ್ನು ತೋರಿಸುತ್ತದೆ. ಅದೇ ರೀತಿ ಎಲ್ಲಾ ಪ್ರಾಣಿ ಪಕ್ಷಿಗಳಿಗಿಂತ ಮನುಷ್ಯ ಪ್ರಾಣಿ ಬುದ್ಧಿವಂತ ಹಾಗೂ ಆಲೋಚನಾ ಶಕ್ತಿಯುಳ್ಳವನು. ಸಾಕು ಪ್ರಾಣಿಗಳು ಗುಂಪು ಗುಂಪಾಗಿ ವಾಸ ಮಾಡದಿದ್ದರೂ, ಅವು ತಮ್ಮ ಜಾತಿಯ ಪ್ರಾಣಿಗಳನ್ನು ಕಂಡಾಗ ಆ ಗುಂಪಿಗೆ ಸೇರಿಬಿಡುತ್ತವೆ. ಆದುದರಿಂದ ಮನುಷ್ಯನಿಗಾಗಲೀ, ಪ್ರಾಣಿಗಳಿಗಾಗಲೀ ಗುಂಪಾಗಿ ವಾಸಮಾಡುವುದೇ ಇಷ್ಟ.

ಮನುಷ್ಯ ಪ್ರಾಣಿ ಪಕ್ಷಿಗಳ ಬದುಕು ಈ ರೀತಿ ಪ್ರಕೃತಿಕವಾಗಿ ಇರುವಾಗ ಭಾವೈಕ್ಯ ಎಂಬ ಶಬ್ದಕ್ಕೆ ಅರ್ಥವೇನು ? ಎಂಬುದನ್ನು ವಿಶ್ಲೇಷಣೆ ಮಾಡಬೇಕಾಗಿದೆ. ಆದಿಮಾನವನ ಕಾಲದಿಂದಲೂ ಮನುಷ್ಯ ಸಂಘಜೀವಿ. ಆದರೆ ಬರು ಬರುತ್ತಾ ಎಷ್ಟೋ ಲಕ್ಷಾಂತರ ವರ್ಷಗಳು ಗತಿಸಿದ ನಂತರ ಮಾನವ ಜನಸಂಖ್ಯೆ ಹೆಚ್ಚಾದಂತೆಲ್ಲಾ ಕೆಲವು ಪಂಗಡಗಳು ಅವರವರ ಗುಂಪುಗಳನ್ನು ರಚಿಸಿ ಅಲ್ಲಿನ ಗುಂಪಿನಲ್ಲಿ, ದೇಹ ಶಕ್ತಿಯಲ್ಲಿ ಮತ್ತು ಬುದ್ಧಿಶಕ್ತಿಯಲ್ಲಿ ಹೆಚ್ಚಿನವನನ್ನು ತೋರಿಸಿದರೆ ಅವನೇ ಆ ಪಂಗಡಗಳ ಮುಂದಾಳು ಆಗುತ್ತಾನೆ. ಈ ರೀತಿಯಾಗಿ ಗುಂಪುಗಳು ಬೆಳೆದು ಒಂದು ಗುಂಪಿನವರೊಡನೆ ಇನ್ನೊಂದು ಗುಂಪು ಯಾವುದೋ ಸಣ್ಣ ಪುಟ್ಟ ಕಾರಣಗಳಿಗಾಗಿ ಘರ್ಷಣೆ ಪ್ರಾರಂಭವಾಗಿ ಈ ಘರ್ಷಣೆಯ ಕಾರಣದಿಂದ ದ್ವೇಷ ಬೆಳೆದು ಅದು ದೊಡ್ಡದಾಗಿ ಗುಂಪು ಗುಂಪುಗಳಲ್ಲಿ ಯುದ್ಧ ಪ್ರಾರಂಭವಾಗಲು ಕಾರಣವಾಗಿ ರಾಜ್ಯ ಸ್ಥಾಪನೆಯು ಹುತಕ್ಕೆ ತಲಪಿ "ಯಥಾ ರಾಜ ತಥಾ ಪ್ರಜಾ" ಎಂಬ ಗಾದೆಯಂತೆ ರಾಜನು ಆರಾಧಿಸುವ ದೇವರ ಆಚಾರ ವಿಚಾರಗಳನ್ನು ಪ್ರಜೆಗಳೂ ಆಚರಿಸುವಂತಾಯಿತು.

ಈ ರೀತಿ ರಾಜರು ಹಾಗೂ ಮತಗಳು ಪ್ರಾರಂಭವಾಗಿ ರಾಜ–ರಾಜರಿಗೆ, ಮತ–ಮತಗಳಿಗೆ ಸ್ಪರ್ಧೆ, ಘರ್ಷಣೆ ಪ್ರಾರಂಭವಾಯಿತು. ಒಂದು ಮತ ಹೆಚ್ಚಿನ ಪ್ರದೇಶದಲ್ಲಿ ವ್ಯಾಪ್ತಿಯಾದಾಗ ಮತಗಳೂ ಒಂದೊಂದು ಪಂಗಡಗಳಾಗಿ ಜಾತಿಗಳು ಹುಟ್ಟಿಕೊಂಡವು. ನಂತರ ಜಾತಿ ಜಾತಿಗಳಿಗೆ ಘರ್ಷಣೆ ಪ್ರಾರಂಭವಾಯಿತು.

ಈ ರೀತಿಯಾಗಿ ಮನುಷ್ಯ ನಾಗರೀಕತೆಯನ್ನು ಹೊಂದಿದಾಗೆಲ್ಲಾ ಘರ್ಷಣೆಗಳು, ಯುದ್ಧಗಳು ಹೆಚ್ಚಾಗಿ ಆದಿ ಮಾನವನ ಕಾಲದಲ್ಲಿ ಮನುಷ್ಯ ಜಾತಿಯಲ್ಲಿ ಒಂದು ಎಂಬ ಭಾವನೆಯೇ ಇಲ್ಲವಾಗಿ ಬರು ಬರುತ್ತಾ ವ್ಯಕ್ತಿಗತವಾದ ಭಾವನೆಗಳಿಗೆ ಎಡೆ ಮಾಡಿ ಕೊಡಲಾಗಿದೆ.

ಇದೇ ರೀತಿ ಗೌಡರಲ್ಲಿ ಹಿಂದೆ ಹತ್ತು ಕುಟುಂಬ ಹದಿನೆಂಟು ಗೋತ್ರದ ಜನರೆಲ್ಲಾ ಒಂದೇ ಎಂಬ ಭಾವನೆ ಇತ್ತು. ಗೌಡರಲ್ಲಿ ಬಡವ, ಬಲ್ಲಿದನೆಂಬ ಭೇದ ಭಾವ ಇರಕೂಡದೆಂದು ಮದುವೆ ಸಮಾರಂಭಗಳಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೇವ ಸಭೆಯನ್ನು ಕೇಳಿಯೇ ಕೆಲಸ ಪ್ರಾರಂಭಿಸಬೇಕು. ನೆರೆದಿದ್ದ ಜನರು ಒಳ್ಳೆ ಕಾರ್ಯ ಎಂಬುದಾಗಿ ಹೇಳಿದ ನಂತರ ಕಾರ್ಯದಲ್ಲಿ ತೊಡಗುವುದು ಈ ರೀತಿಯ ಒಕ್ಕಣೆಯ ಅರ್ಥವೆಂದರೆ, ಮದುವೆಯಾಗುವ ವಧು/ವರ ಹತ್ತು ಕುಟುಂಬ ಹದಿನೆಂಟು ಗೋತ್ರದ ಮಗುವೆಂದೂ, ಅವನ/ಅವಳ ಮದುವೆ ಹತ್ತು ಕುಟುಂಬ ಹದಿನೆಂಟು ಗೋತ್ರದವರೆಲ್ಲಾ ಸೇರಿ ಮಾಡುವುದೆಂದೂ ಅರ್ಥ. ಈಗ ಆ ಮಾತು ಬರೀ ಒಂದು ಸಂಕೇತವಾಗಿ ಹೇಳುತ್ತಾರೆಯೇ ಹೊರತು ಈ ಮಾತನ್ನು ಹೇಳುವ ಕಾಲದಲ್ಲಿ ಗಮನ ಕೊಡುವವರಿಲ್ಲ. ಒಂದು ಕಡೆ ಮದುವೆ ಕಾರ್ಯಗಳು ನಡೆಯುತ್ತಿದ್ದರೆ ಇನ್ನೊಂದು ಕಡೆ ಗುಂಪು ಜನ ಸೇರಿಕೊಂಡು ಮಾತಾಡುತ್ತಿರುತ್ತಾರೆ. ಸಭೆಯ ಶಿಸ್ತು ಕಾಣದಾಗಿದೆ, ಹತ್ತು ಕುಟುಂಬ ಹದಿನೆಂಟು ಗೋತ್ರವೆಂಬುದು ಬರೇ ಬಾಯಿಮಾತಿನದಾಗಿದ್ದು ಈ ಕುಟುಂಬಗಳಲ್ಲಿ ಭಾವೈಕ್ಯತೆ ಇಲ್ಲದಾಗಿದೆ. ಮನುಷ್ಯ ಮನುಷ್ಯನಲ್ಲಿ ಪ್ರೀತಿ ಇಲ್ಲದಾಗಿದೆ. ವಿಶ್ವಾಸ ಇಲ್ಲದಾಗಿದೆ. ಹಣವಂತರು ಹಣವಂತರೊಡನೆಯೇ ಒಡನಾಟ, ನೆಂಟಸ್ಥಿಕೆ. ಬಡವನು ಮೂಲೆಗುಂಪಾಗಿದ್ದಾನೆ. ರಾಷ್ಟ್ರ ರಾಷ್ಟ್ರಗಳಲ್ಲಿ, ರಾಜ್ಯ–ರಾಜ್ಯಗಳಲ್ಲಿ ಸೌಹಾರ್ದತೆ ಇಲ್ಲ, ಶಾಂತಿ ಇಲ್ಲ. ಅದೇ ರೀತಿ ನಮ್ಮ ಸಮಾಜದ ಜನರಲ್ಲಿ ಸೌಹಾರ್ದತೆ ಇಲ್ಲದೆ ಒಬ್ಬರನೊಬ್ಬರು ಅನ್ಯೋನ್ಯ ಭಾವದಿಂದ ಕಾಣುವುದಿಲ್ಲ.

ಹತ್ತು ಕುಟುಂಬ ಹದಿನೆಂಟು ಗೋತ್ರದ ಜನರು ನಮ್ಮ ಹಿರಿಯರು ಬಾಳಿ ಬದುಕಿದಂತೆ ಒಗ್ಗಟ್ಟಿನಿಂದ, ಪ್ರೀತಿ ವಿಶ್ವಾಸದಿಂದ ಬಾಳಿ ಬದುಕುವ ದಾರಿಯನ್ನು ಕಾಣಲು ಸಾಧ್ಯವಿಲ್ಲವೆ? ಎಂದು ಗೌಡ ಸಮಾಜವನ್ನು "ಕೊಡಗು ಸಂಗಾತಿ" ಪ್ರಶ್ನಿಸುತ್ತಿದೆ.

○

---

## ಅರ್ಥಪೂರ್ಣ

ಭಾರತ : ಭಾಗ್ಯದ ರಕ್ಷಣೆಯ ತಳಹದಿ.

ಶಾಸಕ : ಶಾಸನ ಸಮಿತಿಯ ಕರ್ತೃ.

ವಿಧಾನ ಪರಿಷತ್ತು : ವಿಧಾನಸಭೆಯ ಧಾರ್ಮಿಕ ನವೀನತೆಗಳನ್ನು ಪರಿಶೀಲಿಸುವ ಪರತತ್ತುಗಾರರು.

ಉಪಾಧ್ಯಾಯ : ಉತ್ತಮವಾದ ಪಾವಿತ್ರ್ಯತೆ ಹೊಂದಿರುವ ಧ್ಯಾನತೆಯ ಯಶಸ್ಸನ್ನು ಎರವಲು ಮಾಡುವವ.

ಉಪನ್ಯಾಸಕ : ಉತ್ತಮ ಪ್ರಗತಿಯ ನ್ಯಾಯ ಸಂಘಟನೆಯ ಕರ್ತೃ.

# ಯುವ ಪ್ರತಿಭೆಗೆ ಸಂದ ಗೌರವ

ಕೊಡಗಿನ, ನಮ್ಮ ಜನಾಂಗದ ಹೆಚ್ಚಿನ ಜನರು ಕೇಳಿಯೂ, ನೋಡಿಯೂ, ತಿಳಿಯದೆ ಇರುವ ಶ್ರೀ ಬಡ್ಡನ ರಾಜ್ ಚಂಗಪ್ಪನವರು ಬೆಂಗಳೂರಿನ Bhiship Cotton ಶಾಲೆ ಮತ್ತು Christ College ನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ B. Sc. Communication ಡಿಗ್ರಿಯನ್ನು ಪಡೆದರು. ಓದುಗಾರಿಕೆ ಮುಗಿಸಿ 70ರ ದಶಕದಲ್ಲಿ ಬೆಂಗಳೂರಿನಲ್ಲಿ ಆಗ ಮುದ್ರಿಸುತ್ತಿದ್ದ City Tab ನಂತರ ದೆಹಲಿಯಲ್ಲಿ New Delhi ಎಂಬ ದಿನಪತ್ರಿಕೆಗೆ ಸಂಪಾದಕರೂ, ಬರಹಗಾರರೂ ಆಗಿ ಸ್ವಲ್ಪ ಸಮಯ ಕೆಲಸ ಮಾಡಿ ತಮ್ಮ ಪತ್ರಿಕೋದ್ಯಮದ ಜ್ಞಾನವನ್ನು ಹೆಚ್ಚಿಸಿಕೊಂಡರು. ಇವರ ಬರೆಯುವಿಕೆಯ ಜಾಣ್ಮೆಯನ್ನು ನೋಡಿ, 1981ರಲ್ಲಿ ಡೆಲ್ಲಿಯಲ್ಲಿ ಮುದ್ರಿಸಲಾಗುತ್ತಿದ್ದ India Today ಎಂಬ ವಾರಪತ್ರಿಕೆಯವರು ಇವರನ್ನು ಆಹ್ವಾನಿಸಿಕೊಂಡರು. ಇವರನ್ನು ರಾಷ್ಟ್ರಪತಿ, ಪ್ರಧಾನಮಂತ್ರಿ ಮತ್ತು ಇನ್ನಿತರ ಪ್ರಮುಖ ರಾಜಕೀಯ ವ್ಯಕ್ತಿಗಳ, ದೇಶ ವಿದೇಶ ಪ್ರವಾಸಗಳ ಮಾತುಕತೆಗಳ ವಿಷಯ ಪತ್ರಿಕೆಯಲ್ಲಿ ಅಳವಡಿಸಲು ಕಳುಹಿಸುತ್ತಿದ್ದರು. ಹೀಗೆ ರಾಜ್ ಚೆಂಗಪ್ಪನವರ ಪತ್ರಿಕೋದ್ಯಮದ ಪ್ರತಿಭೆಯನ್ನು ಗುರುತಿಸಿ ಇಂಡಿಯಾ ಟುಡೇ ಈ ಕೆಳಗಿನ ಬಹುಮಾನ/ಬಿರುದುಗಳನ್ನು ಕೊಟ್ಟು ಅವರನ್ನು ಸನ್ಮಾನಿಸಿದೆ :

1985ರಲ್ಲಿ Harry Britiani ಎಂಬ ಗೌರವವನ್ನು ನೀಡಿ, 6 ತಿಂಗಳ ಕಾಲ ಇಂಗ್ಲೆಂಡಿನ Oxford ಯೂನಿವರ್ಸಿಟಿಯಲ್ಲಿಯೂ ಮತ್ತು ಇನ್ನು 6 ತಿಂಗಳು ಲಂಡನ್ ಯೂನಿವರ್ಸಿಟಿಯಲ್ಲಿಯೂ ಹೆಚ್ಚಿನ ತರಬೇತಿಗೆ ಅವಕಾಶ ಮಾಡಿಕೊಟ್ಟರುವರು.

1987ರಲ್ಲಿ Statesman award for rural reporting ಗಿಟ್ಟಿಸಿಕೊಂಡರು.

1990-91ನೇ ಸಾಲಿಗೆ Nieman Fellow ಎಂಬ ಪ್ರಶಸ್ತಿ ಪಡೆದು, ಅಮೇರಿಕದ Howard ಯೂನಿವರ್ಸಿಟಿಯಲ್ಲಿ ಒಂದು ವರ್ಷದ ಹೆಚ್ಚಿನ ಅನುಭವ ಪಡೆದು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಂಡರು.

1995ರಲ್ಲಿ Henry spinson fellowship for security issues ಎಂಬ ಹೆಗ್ಗಳಿಕೆಯನ್ನು ವಾಷಿಂಗ್‌ಟನ್, ಡಿ.ಸಿ.ಯಿಂದ ಪಡೆದುಕೊಂಡರು.

ಈಗ ದೇಶದ 50ನೇ ವರ್ಷದ ಸುವರ್ಣ ಮಹೋತ್ಸವ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ 1997-98ನೇ ಸಾಲಿಗೆ ರಾಜ್ ಚೆಂಗಪ್ಪನವರು 'Prem Bhatia memorial award' for excellency in political reporting and analysis ಬಿರುದನ್ನು ಹಾಗೂ ರೂ. ಒಂದು ಲಕ್ಷದ ಬಹುಮಾನವನ್ನು ಪಡೆದುಕೊಂಡ ಜನಾಂಗದ ಪ್ರಥಮ ಪತ್ರಿಕೋದ್ಯಮಿ.

ರಾಜ್ ಚೆಂಗಪ್ಪನವರು ಮೇಜರ್ ಚೆಂಗಪ್ಪ ಮತ್ತು ಹೇಮಾವತಿ ಚೆಂಗಪ್ಪನವರ ಸುಪುತ್ರರಾಗಿರುವರು. ಇವರ ತಾತ ಮೇಜರ್ ರಾಮಪ್ಪನವರು ಅಂದಿನ ಕೊಡಗು ಸಿ ಪ್ರಾಂತ್ಯದ ಬ್ರಿಟೀಷರ ಆಳ್ವಿಕೆಯಲ್ಲಿದ್ದಾಗ ನಮ್ಮ ಜನಾಂಗದ ಮೊಟ್ಟಮೊದಲಿನ ಮೇಜರ್ ಹಾಗೂ ಪ್ರಪಂಚದ ಎರಡು ಮಹಾಯುದ್ಧಗಳಲ್ಲಿ ದೇಶ ವಿದೇಶಗಳಲ್ಲಿ ಹೋರಾಡಿ ಕೀರ್ತಿ ತಂದ ವೀರರೂ ಹೌದು ಧೀರರೂ ಹೌದು. ಇವರ ಅಜ್ಜಿ ದಿ|| ರುಕ್ಮಿಣಿಯವರು. ಇವರ ಹೆಂಡತಿ ಉಷಾ. ಅಧಿತಿ ಮತ್ತು ಅನಿಷ್ ಎಂಬ ಇಬ್ಬರು ಮಕ್ಕಳು ಇದ್ದಾರೆ.

ರಾಜ್ ಚೆಂಗಪ್ಪನವರು ಪ್ರಸ್ತುತ ತಾವು ಕಾರ್ಯ ನಿರ್ವಹಿಸುತ್ತಿರುವ ಪತ್ರಿಕೆ ಇಂಡಿಯಾ ಟುಡೆಯಲ್ಲಿ Deputy Editor ಆಗಿ ಮೂರನೆ ಸ್ಥಾನದಲ್ಲಿರುವರು. ಅರೆಭಾಷಿಕರ ಕಣ್ಮಣಿ ಆದ ಇವರು ಪತ್ರಿಕೋದ್ಯಮದಲ್ಲಿ ಇನ್ನೂ ಹೆಚ್ಚಿನ ಪ್ರಕಾಶವನ್ನು ಬೀರಿ ಉನ್ನತ ಮಟ್ಟಕ್ಕೇರಲಿ ಎಂದು ಗೌಡ ಜನಾಂಗದ ಮತ್ತು ಅರೆಭಾಷಿಕರ ಪರವಾಗಿ ಕೊಡಗು ಸಂಗಾತಿ ಶುಭವನ್ನು ಕೋರುತ್ತದೆ ಎಂದು ತಿಳಿಸಲು ಹರ್ಷಿಸುತ್ತದೆ. ○

—ಸಂ

---

## ಕಠಿಣ ಪದಗಳ ಅರ್ಥ

ದೇವಸ್ಥಾನ : ಹಳೇ ಪಾದರಕ್ಷೆಗಳನ್ನು ಹೊಸ ಪಾದರಕ್ಷೆಗಳಾಗಿ ಮಾರ್ಪಡಿಸುವ ಒಂದು ಪುಣ್ಯ ಕ್ಷೇತ್ರ.

ರಾಜಕಾರಣಿ : ಸೀಟಿಗಾಗಿ ದ್ರೋಹ ಬಗೆದು ದೇಶವನ್ನು ಹಾಳು ಮಾಡುವ ಪುಡಾರಿ.

ಕಾಲೇಜ್ : ಇನ್ನಿತರ ಪಾಠಗಳ ಜೊತೆಗೆ ಪ್ರೇಮ ಪಾಠವನ್ನು ತಿಳಿದುಕೊಳ್ಳುವ ಒಂದು ಆಲಯ.

ಕಂಡೆಕ್ಟರ್ : ನಮ್ಮ ಜೀವನದಲ್ಲಿ, ಮುಂದೆ ಹೋಗಿ ಎಂದು ಉಪದೇಶಿಸುವ ಏಕೈಕ ವ್ಯಕ್ತಿ.

ಬಾರ್ಬರ್ : ಹಿರಿಯರ ಮುಂದೆ ತಲೆ ಬಾಗದವನನ್ನು ಬಗ್ಗಿಸುವ ಬ್ರಹ್ಮ ಪುತ್ರ.

ಶಿಕ್ಷಕ : ಮೆದುಳಿಲ್ಲದ ತಲೆಗಳಿಗೆ ವಿದ್ಯೆಯನ್ನು ತುಂಬಿಸಲು ಹೋರಾಡುವ ಸರಸ್ವತಿ ಪುತ್ರ.

○ **ಅಂಚೆ ಮನೆ ಸುಧಿ,** ಅಜ್ಜಾವರ್‌ಮಂಗಲ.

## ಗ್ರಹ ಸಂಗಾತಿ

**ಭರಣಿ–2**

ಈ ನಕ್ಷತ್ರ 1ನೇ ಪಾದಕ್ಕೆ ಸಿಂಹಾಂಶವಾಗುವುದು. ಸೂರ್ಯನಧಿಪತಿ ಇದರಲ್ಲಿ ಜನಿಸಿದವನು ರಾಜಭೋಗಿಯೂ, ಶೂರನೂ, ಧೀರನೂ, ಸಾಹಸಗಾರನೂ, ಕೀರ್ತಿಶಾಲಿಯೂ ಆಗುವನು. 2ನೇ ಪಾದಕ್ಕೆ ಕನ್ಯಾಂಶವಾಗುವುದು. ಬುಧ ಅಧಿಪತಿ ಇದರಲ್ಲಿ ಜನಿಸಿದವನು ವಿದ್ಯಾವಂತನಾದರೂ ಪೌರಷತ್ವ ಹೀನನೂ, ಲೋಭಿಯೂ, ವಂಚಕನು ಆಗುವನು. 3ನೇ ಪಾದಕ್ಕೆ ತುಲಾಂಶವಾಗುವುದು. ಶುಕ್ರನ ಅಧಿಪತಿ ಇದರಲ್ಲಿ ಜನಿಸಿದವನು ಶೂರನೂ, ಧೀರನೂ, ಸಾಹಸಗಾರನೂ, ಜನರಿಂದ ಮನ್ನಣೆ ಪಡೆಯತಕ್ಕವನೂ ಆಗುವನು. 4ನೇ ಪಾದಕ್ಕೆ ವೃಶ್ಚಿಕಾಂಶವಾಗುವುದು. ಕುಜನಧಿಪತಿ ಇದರಲ್ಲಿ ಜನಿಸಿದವನು ಕ್ರೂರನೂ, ದರಿದ್ರನೂ, ನಿಷ್ಠುರ ಮಾತಿನವನೂ, ಸಿಂಹಸ ಕನೂ, ಕೋಪಿಯೂ, ಮತ್ಸರ ಉಳ್ಳವನೂ, ಮೋಸಗಾರನೂ ಮಕ್ಕಳೊಂದಿಗನೂ ಆಗುವನು.

**ಈ ನಕ್ಷತ್ರದ ಸಾರಾಂಶ ಜಾತಕ ಫಲ**

ಈ ನಕ್ಷತ್ರದಲ್ಲಿ ಹುಟ್ಟಿದ 1ನೇ ತಿಂಗಳಲ್ಲಿ ಜ್ವರ ಪೀಡೆ. 2–4ನೇ ವರ್ಷಗಳಲ್ಲಿ ಬಾಲಾರಿಷ್ಟವು. 8ನೇ ವರ್ಷದಲ್ಲಿ ಜ್ವರ ಗಂಡಾಂತರ. 10–14ನೇ ವರ್ಷಗಳಲ್ಲಿ ಜಲಭಯ, ವಾಹನ, ಪಶುಭಯ. 18ನೇ ವರ್ಷದಲ್ಲಿ ಗಂಡಾಂತರ ಕಾಯಿಲೆ. 20–22ನೇ ವರ್ಷಗಳಲ್ಲಿ ಸ್ತ್ರೀರೋಗವು. 24ನೇ ವರ್ಷದಲ್ಲಿ ಕಂಟಕ ಪ್ರಾಪ್ತಿ. 27–30ನೇ ವರ್ಷಗಳಲ್ಲಿ ಶತ್ರುಭಯ. 37–40ನೇ ವರ್ಷಗಳಲ್ಲಿ ಕಾಯಿಲೆ. 50–58ನೇ ವರ್ಷಗಳಲ್ಲಿ ಮಾರಕ ಇವು ಕಳೆದರೆ 75 ವರ್ಷ ಪರಮಾಯುಷ್ಯ. ○

## ಪ್ರತಿಕ್ರಿಯೆ

### ಗೌಡರು ಕೊಡಗಿಗೆ ವಲಸೆ ಬಂದವರಲ್ಲ

[ಸಂಚಿಕೆ 19, ಜನವರಿ 1–15 1998]

ಕೊಡಗು ಸಂಗಾತಿಯು ಈ ಮೇಲಿನ ಸಂಚಿಕೆಯಲ್ಲಿ ಪ್ರಕಟವಾದ "ಗೌಡರು ಕೊಡಗಿಗೆ ವಲಸೆ ಬಂದವರಲ್ಲ" ಎಂಬ ನನ್ನ ಲೇಖನಕ್ಕೆ ಚರಿತ್ರೆಯನ್ನು ಅಸ್ಪೃಶ್ಯವೆಂದು ಭಾವಿಸುವ ಒಬ್ಬರು ಪ್ರತಿಕ್ರಿಯಿಸಿದ ಲೇಖನವನ್ನು 2 ಸಲ ಸತತವಾಗಿ ಮುದ್ರಿಸಿದ್ದೀರಿ. 1785ರಲ್ಲಿ ದೊಡ್ಡವೀರರಾಜನು ಪಿರಿಯಾ ಪಟ್ಟಣ ಜೈಲಿನಲ್ಲಿದ್ದ. 1789ರಲ್ಲಿ ಕೊಡಗರು ಆತನನ್ನು ಬಿಡಿಸಿಕೊಂಡು ಬಂದರೆಂಬುದು ಬದಲಾಯಿಸಲಾಗದ ಚರಿತ್ರಾ ದಾಖಲೆ. ಅಂದರೆ ಆ ಕಾಲದಲ್ಲಿ ನಮ್ಮನ್ನು ಕೊಡಗಿಗೆ ಕರೆಸಿ ಕೊಂಡ ರಾಜ ಯಾರು ?

ಚರಿತ್ರೆ ಬಗ್ಗೆ ತಿಳುವಳಿಕೆ ಇಲ್ಲದವರ ಪ್ರಕಾರ ಕೊಡಗರು, ಗೌಡರು ಒಂದೇ ನಾಣ್ಯದ 2 ಮುಖಗಳು. ನಾಣ್ಯ ಚಿಮ್ಮಿ, ತಲೆ ಬಿದ್ದರೆ ನಾವು ಗೆದ್ದವು, ಬಾಲ ಚಿಮ್ಮಿ ಬಿದ್ದರೆ ಸೋತಿರಿ ಎನ್ನುವ ಆಟ ಕೊಡಗಿನಲ್ಲಿ ಇನ್ನೂ ಮುಂದುವರಿಯಬಹುದೆ ?

ಇದಕ್ಕೆ ನಿಮ್ಮ ಅಭಿಪ್ರಾಯವೇನು ?

ಎನ್. ಎಸ್. ದೇವಿಪ್ರಸಾದ್,
ಅಧ್ಯಕ್ಷರು
ಕೊಡಗು ಪ್ರಜಾವೇದಿಕೆ ಕೊಡಗು

# ದಿ|| ನಿಡ್ಯಮಲೆ ಸೋಮಣ್ಣನವರು

## [ಗೌಡಕೇಸರಿ ದಿ|| ನಿಡ್ಯಮಲೆ ಮುದ್ದಪ್ಪನವರ ಕಿರಿಯ ಸಹೋದರ]

1905ರ ಏಪ್ರಿಲ್ 15ರಂದು ಕೊಡಗಿನ ಪೆರಾಜೆ ಗ್ರಾಮದಲ್ಲಿ ಸರ್ಕಾರಿ ನೌಕರನ ಮಗನಾಗಿ ಜನ್ಮತಾಳಿದ ಇವರ ಪ್ರೌಢ ವಿದ್ಯಾಭ್ಯಾಸ ಮಡಿಕೇರಿಯ ಸೆಂಟ್ರಲ್ ಶಾಲೆಯಲ್ಲಿ. ಪದವಿ ಮಂಗಳೂರಿನ ಸೈಂಟ್ ಅಲೋಸಿಯಸ್‌ನಲ್ಲಿ ಮತ್ತು 1930 ರಲ್ಲಿ ಮದರಾಸು ವಿಶ್ವವಿದ್ಯಾನಿಲಯದಲ್ಲಿ 'ಲಾ' ಪದವಿಯನ್ನು ಗಳಿಸಿದರು.

ವಿದ್ಯಾಭ್ಯಾಸ ಮುಗಿದೊಡನೆ ಕಾಂಗ್ರೆಸ್ ಪಾರ್ಟಿಗೆ ಸೇರಿ, ಒಂದು ಸಾರಿ ಕೊಡಗು ಜಿಲ್ಲಾ ಕಾಂಗ್ರೆಸ್ಸಿನ ಸಮಿತಿಯ ಉಪಾಧ್ಯಕ್ಷರಾಗಿದ್ದರು. ಸೈಮನ್ ಕಮಿಷನ್ನಿನ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸಿದ ಚಳುವಳಿಯಲ್ಲಿ ಮುಖ್ಯಪಾತ್ರವನ್ನು ವಹಿಸಿದ್ದಾರೆ. ತದನಂತರ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ. 1942ರ 'ಭಾರತಬಿಟ್ಟು ತೊಲಗಿರಿ' ಸತ್ಯಾಗ್ರಹದಲ್ಲಿ ಭಾಗವಹಿಸಿ ಅವರನ್ನು ಜೈಲಿಗೆ ಕಳುಹಿಸುವುದರಿಂದ ತಪ್ಪಿಸಿಕೊಂಡು ಗುಪ್ತವಾಗಿ ಕೆಲಸ ಮಾಡಿ ಸೇವೆಯನ್ನು ಸಲ್ಲಿಸಿದ್ದಾರೆ.

ಶ್ರೀಯುತ ಸೋಮಣ್ಣನವರು 1945 ರಲ್ಲಿ ಕೊಡಗಿನ ಲೆಜಿಸ್ಲೇಟಿವ್ ಕೌನ್ಸಿಲಿನ ಸದಸ್ಯರಾಗಿ, ಕೌನ್ಸಿಲ್‌ನ ಸಕ್ರಿಯ ಕಾರ್ಯಕಲಾಪಗಳಲ್ಲಿ ಭಾಗವಹಿಸಿ, ರಾಜ್ಯದ ಆರ್ಥಿಕ ಭದ್ರತೆ, ರಾಜ್ಯದ ಯೋಜನೆಗಳನ್ನು ರೂಪಿಸುವುದರಲ್ಲೂ ಹರಿಜನರ ಸ್ಥಿತಿಯನ್ನು ಉದ್ಧರಿಸುವುದರಲ್ಲಿಯೂ, ಕೌನ್ಸಿಲಿನಲ್ಲಿ ನಡೆದ ಚರ್ಚೆಗಳಲ್ಲಿ ತುಂಬಾ ಶ್ರಮವಹಿಸುತ್ತಿದ್ದರು. ಅವರು ರಾಜ್ಯದ ಪಂಚವಾರ್ಷಿಕ ಯೋಜನೆಯ ಮಂಡಳಿಯಲ್ಲೂ, ಹರಿಜನರ ಉದ್ಧಾರ ಕೆಲಸಕಾರ್ಯಗಳ ಮಂಡಳಿಯ ಸದಸ್ಯರಾಗಿಯೂ, ಲೆಜಿಸ್ಲೇಟಿವ್ ಕೌನ್ಸಿಲಿನ ಹಣಕಾಸಿನ ಸಮಿತಿಯಲ್ಲೂ ಸಾಕಷ್ಟು ದುಡಿದಿದ್ದಾರೆ.

ಗಾಂಧೀಜಿಯವರ ಭಕ್ತರೂ ಮತ್ತು ಶಿಷ್ಯರೂ ಆದ ಇವರು ಸಮಾಜದಲ್ಲಿದ್ದ ದುಷ್ಟ ಸ್ಥಿತಿಗಳಾದ ಅಸ್ಪೃಶ್ಯತೆ ಮುಂತಾದವುಗಳನ್ನು ಹೋಗಲಾಡಿಸಲು ಹರಿಜನರ ಉದ್ಧಾರ ಕಾರ್ಯದಲ್ಲೂ, ಖಾದಿಯನ್ನು ಪ್ರಚಾರ ಮಾಡುವ ವಿಷಯದಲ್ಲಿ ತುಂಬಾ ದುಡಿದಿದ್ದಾರೆ. ಕೃಷಿಯೇ ಪ್ರಧಾನವಾದ ರಾಷ್ಟ್ರದ ಒಬ್ಬ ಕುವರನಾಗಿ ಕೃಷಿಕರ ಅಭಿವೃದ್ಧಿಯ ಬದಲಾವಣೆಯ ಕಾನೂನು ಕಾಯಿದೆಗಳನ್ನು ರೂಪಿಸಲು ದುಡಿದಿದ್ದಾರೆ. ಕೃಷಿಗಳನ್ನು ನಾಶ ಮಾಡುವ ಕೀಟಗಳ ನಿರ್ಮೂಲನಕ್ಕಾಗಿ ಲಂತಾನ ಕಮಿಟಿಯಲ್ಲೂ ತುಂಬಾ ಕೆಲಸ ಮಾಡಿದ್ದಾರೆ.

ಅವರಿಗೆ ಬಹುಶಃ ಸಾಮಾಜಿಕ ಹಾಗೂ ವಿದ್ಯಾಭ್ಯಾಸದ ಸುಧಾರಣೆಯಲ್ಲಿ ಆಸಕ್ತಿ ಇದ್ದುದರಿಂದಲೇನೊ ಅವರನ್ನು ಕೊಡಗಿನಿಂದ ಮುಂಬೈ ಸರ್ಕಾರದವರು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಇದರ ಸಮಿತಿಯ ಒಬ್ಬ ಸದಸ್ಯರಾಗಿ ನೇಮಿಸಿದ್ದರು.

1949ರಲ್ಲಿ ಸರ್ದಾರ್ ವಲ್ಲಭಾಯಿ ಪಟೇಲರು ಕೊಡಗಿನ ಭವಿಷ್ಯದ ವಿಷಯ ಚರ್ಚಿಸಲು ಇವರಿಗೆ ದೆಹಲಿಗೆ ಬರಲು ಆಹ್ವಾನವಿತ್ತಿದ್ದರು.

1952ರಲ್ಲಿ ಪ್ರಪ್ರಥಮ ಭಾರತದ ಪ್ರಜಾಪ್ರಭುತ್ವದ ಲೋಕಸಭೆಯ ಸದಸ್ಯರಾಗಿ ಆಯ್ಕೆಯಾದರು.

ಕೊಡಗಿಗೆ ಸಂಬಂಧಪಟ್ಟ ವಿಷಯಗಳಲ್ಲಿ ಅಲ್ಲದೆ ಇವರು ದೇಶದ ರಕ್ಷಣೆಯ ವಿಷಯದಲ್ಲಿ ಹೆಚ್ಚಿಗೆ ಆಸಕ್ತಿ ತೋರಿಸಿ ಭಾರತದಲ್ಲಿ ದಕ್ಷತೆಯ ವಿಮಾನ ಬಲ ಮತ್ತು ನೌಕಾ ಬಲವನ್ನು ನಮ್ಮ ಉದ್ದವಾದ ಕರಾವಳಿಗಳನ್ನು ಕಾಪಾಡಲು ಭದ್ರಪಡಿಸಬೇಕೆಂದು ಭಾರತ ಸರ್ಕಾರವನ್ನು ಒತ್ತಾಯಪಡಿಸುತ್ತಿದ್ದರು.

ದಿ|| ಸೋಮಣ್ಣನವರು ಕೊಡಗು ಒಂದು 'ಸಿ' ಪ್ರಾಂತ್ಯವಾಗಿರುವುದರಲ್ಲಿ ತೃಪ್ತಿಪಡದೆ ಅದು 'ಎ' ಪ್ರಾಂತ್ಯಗಳ ಸಮೂಹದಲ್ಲಿ ಸೇರಿಸಬೇಕೆಂಬ ಬಲವಾದ ಅಭಿಪ್ರಾಯವನ್ನು ಹೊಂದಿದ್ದರು.

ದಿ|| ಸೋಮಣ್ಣನವರು ಒಬ್ಬ ಸರಳ ಸ್ವಭಾವದ ನಿರ್ಮಲ ಮನಸ್ಸಿನ ವ್ಯಕ್ತಿ, ಒಳ್ಳೆಯ ವಾಗ್ಮಿ. ಇವರ ಜೀವನ ನಿಷ್ಕಪಟ ವ್ಯಕ್ತಿತ್ವದಿಂದ ಕೂಡಿತ್ತು.

ದಿ|| ಸೋಮಣ್ಣನವರು ನಂತರ ವಿಧಿವಶಾತ್ ಹಠಾತ್ತನೆ ಪಕ್ಷವಾತ ರೋಗಕ್ಕೆ ತುತ್ತಾದುದರಿಂದ ರಾಜಕೀಯ ಜೀವನ ಕುಂಠಿತವಾಗಿ 1957ನೇ ಇಸವಿಯಲ್ಲಿ ವಿಶಾಲ ಮೈಸೂರು ರಾಜ್ಯವಾದ ನಂತರ ಪೆರಿಯಾಪಟ್ಟಣ ಕ್ಷೇತ್ರದಿಂದ ಮೈಸೂರಿನ ವಿಧಾನಸಭೆಗೆ ಆಯ್ಕೆಯಾದರು. ಅವರು 1960ರಲ್ಲಿ ವಿಧಿವಶರಾದರು. ○

**ಲೇಖನ : ಪೂಜಾರಿ ಮೊಣ್ಣಪ್ಪ**

---

## ಹನಿಕವಿತೆ

### ತೃಪ್ತಿ

ಪ್ರಿಯೆ ನಿನ್ನ ನಾನ್
ಎಷ್ಟ್ ಪ್ರೀತಿಸಿರೂ
ನಿಂಗೆ ಇಲ್ಲೆಲಾ ತೃಪ್ತಿ
ನೀ ಗಂಟ್ ಮುಖ ಹಾಕಿ
ದೂರ ದೂರ ಹೋದರೆ
ನಂಗೆ ಇಲ್ಲೆಲ್ಲಾ ತೃಪ್ತಿ

○ ತೆಕ್ಕಡ ಬಿ. ಕುಮಾರ,
ಮುತ್ತಾರ್ಮುಡಿ.

## ಸ್ತ್ರೀ ಬಹುಮುಖ ಪ್ರತಿಭೆ

ಭಾರತದ ಚರಿತ್ರೆ ಪವಿತ್ರನಾದದ್ದು, ಪರಮ ಪಾವನ, ಅದೇ ಭಗವತಿ, ಸರಸ್ವತಿ. ಆ ಜನರೇ ಭಾರತೀಯರು. ಇದನ್ನರಿಯಲು ವಿದ್ಯೆ, ಜ್ಞಾನ ಬೇಕು. ವಿದ್ಯೆ ಮಾನವನಿಗೆ ಸೌಂಧರ್ಯ, ಧನ, ಶಕ್ತಿ, ಕೀರ್ತಿ, ಭೋಗ, ನಿಜವಾದ ಬಂಧು. ಶಿಸ್ತು ಇಲ್ಲದ ವಿದ್ಯೆ, ನೀತಿಯಿಲ್ಲದ ನಿಯಮ. ವಿದ್ಯೆ ಕಲಿಸಿಕೊಡುವ ಆದಿ ಗುರು ಸ್ತ್ರೀ. ಅವಳೇ ಮಾತೆ. ಅವಳೇ ಸೃಷ್ಠಿಕರ್ತೆ. ಬ್ರಹ್ಮ ಸೃಷ್ಠಿಕರ್ತ ಎನ್ನುತ್ತೇವೆ. ಆದರೆ ಬ್ರಹ್ಮನಿಗೆ ಜನನವಿತ್ತವಳು ಮಾತೆ. ಮಾತೆ ಪರಮ ಪವಿತ್ರ.

ಹಿಂದಿನ ಕಾಲದಲ್ಲಿ ನಾವು ಕಂಡ ಮಾತೆಯರು. ರಾಮನಿಗೆ ಜನ್ಮವಿತ್ತ ಕೌಸಲ್ಯೆ, ಲವ ಕುಶರಿಗೆ ಜನ್ಮವಿತ್ತ ಸೀತೆ, ಶಿವಾಜಿಗೆ ಜನ್ಮವಿತ್ತ ಜೀಜಾಬಾಯಿ, ಗಾಂಧಿಗೆ ಜನ್ಮವಿತ್ತ ಪುತ್ತಳಿಬಾಯಿ. ಇವರೇನು ಸಾಮಾನ್ಯರೇ ? ಘಟಾನುಘಟಗಳ ಜನ್ಮದಾತೆ ಸ್ತ್ರೀ. ಅವಳೇ ಗಾಯಿತ್ರಿ. ಸ್ತ್ರೀಯೆಂದರೆ ಲಕ್ಷ್ಮಿ, ಧರ್ಮಪತ್ನಿ, ಗೃಹಲಕ್ಷ್ಮಿ, ಅರ್ಧಾಂಗಿ, ಆದಿಶಕ್ತಿ, ಪಾವನಮಯಿ, ಮಾಯಾಮಯಿ, ಶಕ್ತಿಮಯಿ, ಶಕ್ತಿ ಸ್ವರೂಪಿಣಿ. ಆದ್ದರಿಂದ ಸ್ತ್ರೀಯನ್ನು ಗೌರವಿಸು. ಪುರುಷನಿಗೆ ಗೌರವ ಸಿಕ್ಕುವುದು ಸ್ತ್ರೀಯಿಂದ.

ಇಂದು ಏನಾಗಿದೆ ? ನಮ್ಮ ವಿದ್ಯೆ, ಜ್ಞಾನ ನೀಚದ ವಿದ್ಯೆ ಮಾಹಿತಿ ತುಂಬುವ ವಿದ್ಯೆ. ಸತ್ಯ, ಪ್ರೇಮ, ಶಾಂತಿ, ದೊರಕದ ವಿದ್ಯೆ. ಈ ವಿದ್ಯೆ ಬರೇ ವ್ಯವಹಾರಿಕ ವಿದ್ಯೆ. ಇದು ಸ್ತ್ರೀಯರ ಕೋಮಲ ಹೃದಯವನ್ನು ಹಾಳುಗೆಡುವ ವಿದ್ಯೆ. ಸರ್ವರಿಗೂ ಮಾರಕ ವಿದ್ಯೆ. ವಿದ್ಯೆಮಾನವನಲ್ಲಿ ಮಾನವತ್ವವನ್ನು ಕಾಣಬೇಕು. ಸೀತೆ ವಿದ್ಯೆದಾಯಿನಿ. ಲವ ಕುಶರನ್ನು ತನ್ನ ವಿದ್ಯೆಯಿಂದ ಪಳಗಿಸಿದಳು. ಗಾಂಧಾರಿ ತನ್ನ ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ತನ್ನ 100 ಜನ ಮಕ್ಕಳನ್ನು ಸಂಸ್ಕರಿಸದೆ ಅವರ ನಾಶಕ್ಕೆ ಕಾರಣಳಾದಳು. ದ್ರೌಪದಿ ತನ್ನ ಕೂದಲಿಗೆ, ಸೀರೆಗೆ ಅನ್ಯರು ಕೈಹಾಕಿದಾಗ ತನ್ನ ಗಂಡಂದಿರನ್ನಾಗಲೀ, ಇತರರನ್ನಾಗಲೀ ಬೇಡಲಿಲ್ಲ. ತನ್ನ ಹೃದಯವಾಸಿ ಕೃಷ್ಣನನ್ನು ಮಾತ್ರ ಕರೆದಳು. ಇದೆಲ್ಲಾ ಸ್ತ್ರೀ ಶಕ್ತಿಗೆ ಉದಾಹರಣೆ.

ಇಂದು ಸ್ತ್ರೀಯರು ಬಹುಮುಖ ಪ್ರತಿಭೆಯುಳ್ಳಿರುವರು. ಯಾರು ಎಲ್ಲೇ ಇರಲಿ, ಹೇಗೆ ಇರಲಿ, ಅವರಲ್ಲಿ ದಿವ್ಯವಾದ, ಧನ್ಯವಾದ ಸ್ತ್ರೀ ಧರ್ಮ ಇದೆ. ಅದೇ ಮಾತೃಧರ್ಮ. ಸ್ವಾತಂತ್ರ್ಯ, ಸಮಾನತೆ, ಮೀಸಲಾತಿಗೆ ಹೋರಾಡಲಿ. ಆದರೆ ತಾನು ಹೊತ್ತು ಹೆತ್ತು, ಸಾಕಿ, ಸಲಹಿದ ಒಂದೆರಡು ಮಕ್ಕಳನ್ನು ಸಂಸ್ಕರಿಸಿ ಸಮಾಜಕ್ಕೆ, ದೇಶಕ್ಕೆ ಪ್ರಯೋಜನಕಾರಿಯಾದ ಮಕ್ಕಳನ್ನು ತಯಾರು ಮಾಡಿ ಸಮಾಜಕ್ಕೆ, ದೇಶಕ್ಕೆ ಅರ್ಪಣೆ ಮಾಡುವುದೇ ನಿಜವಾದ ಮಾತೃ ಕರ್ತವ್ಯ, ಸ್ತ್ರೀಧರ್ಮ. ತಾಯಿಯ ಕಣ್ಣೀರು ಒರಸುವುದು ಮಕ್ಕಳ ಧರ್ಮ. ಭಕ್ತಿ, ಮುಕ್ತಿ, ಶಕ್ತಿಗೆ ಆಶ್ರಯ ಕೊಡುವವಳು ಹೆಂಡತಿ. ಹೆಂಡತಿ [ಗೃಹಲಕ್ಷ್ಮಿ] ಕಣ್ಣೀರಿಡದಂತೆ ನೋಡಿಕೊಳ್ಳುವುದು ಗಂಡನ ಧರ್ಮ. ಧರ್ಮದಲ್ಲಿ ಧರ್ಮ ಮಾತ್ರ ರಕ್ಷಣೆ.

○ **ಚೇಂದ್ರಿಮಾಡ ಗ. ಮುತ್ತಪ್ಪ,**
ಕುಶಾಲನಗರ.

---

## — ನಗೆ ಹನಿಗಳು —

❀ ಭೋದಕ—ಸೇವನೆಗೆ ಬ್ರಾಂದಿ ಮತ್ತು ಸಾರಾಯಿ ಇದರಲ್ಲಿ ಯಾವುದು ಒಳ್ಳೆಯದು !

ಕುಡುಕ—ಸಾರಾಯಿ ಒಳ್ಳೆಯದು. ಬ್ರಾಂದಿಗಾದರೆ ದೂರದ ಪಟ್ಟಣಕ್ಕೆ ಓಡಬೇಕು. ಸಾರಾಯಿಗಾದರೆ ಸುತ್ತಮುತ್ತಲಿನ ಮನೆಗಳಲ್ಲಿ ದಿನಾ ನಿತ್ಯದ ಭಟ್ಟಿಸರಾಯಿ ಸಿಗುತ್ತದೆ.

○ ○ ○

❀ ಪೊಲೀಸ್—ಏನಯ್ಯ ಬಾರಿ ಯೋಚನೆಯಲ್ಲಿದ್ದೀಯಾ ?

ಕಳ್ಳ—ಸಾರ್, ನಿಮ್ಮ ಪತ್ನಿಯವರು ದಿನಾ ಕಛೇರಿಗೆ ಹೋಗುವಾಗ ಮೈ ಮೇಲೆ ಚಿನ್ನಾಭರಣವನ್ನು ಯಾಕೆ ಹಾಕಿಕೊಂಡು ಹೋಗ್ತಾ ಇಲ್ಲಾಂತ ಯೋಚಿಸುತ್ತಿದ್ದೇನೆ.

○ ○ ○

❀ ಗಂಡ—ಏನೇ ದುಡ್ಡಿಲ್ಲಾಂತ ನೀನು ಹೇಳ್ತಿದ್ದೀಯಲ್ಲ. ಈ ಸಿನ್ನ ಸ್ನೋ, ಪೌಡರಿಗೆ ಎಲ್ಲಿಂದ ದುಡ್ಡು ಬಂತು ?

ಹೆಂಡತಿ—ದಿನಾ ನೋಡಿದರೆ ಜೇಬಿನಲ್ಲಿ ಕಾಸಿಲ್ಲಾಂತ ನೀವು ಹೇಳ್ತಿದ್ದೀರಲ್ಲ, ದಿನಾ ಹೆಂಡ ಕುಡಿದು ಬರಲು ನಿಮಗೆಲ್ಲಿಂದ ದುಡ್ಡು ಬಂತು ?

❀ ಗುಂಡಣ್ಣ—ಸಾರ್, ನನ್ನ ಮಗಳು ಕಾಲೇಜಿನಿಂದ 7 ಗಂಟೆಯಾದರೂ ಬರಲಿಲ್ಲ.

ಪೊಲೀಸ್—ನಿನ್ನ ಪಕ್ಕದ ಮನೆಯ ಶೇಷಣ್ಣನ ಮಗ ಕಾಲೇಜಿನಿಂದ ಬಂದಿದ್ದಾನೋ ಇಲ್ವೋಂತ ನೋಡಿ ಬಾ.

○ ○ ○

❀ ವಿಶ್ವ—ರಾಮಾಯಣದಲ್ಲಿ ರಾವಣನಿಗೆ ಹತ್ತು ತಲೆಯಂತೆ !

ಜಗ್ಗು—ಅದೇನು ಮಹಾ ! ನಮ್ಮ ಮನೆಯಲ್ಲಿ 14 ತಲೆಯಿದೆ. ಅಪ್ಪ, ಅಮ್ಮ ಮತ್ತು ನಾವು 12 ಜನ ಮಕ್ಕಳು.

○ **ತೋಟಂಬೈಲು ಗಣಪತಿ (ಗಪ್ಪು) ನರಿಯಂದಡ,**
ಕೊಡಗು.

## ತರಕಾರಿಗಳ ಪಂಕ್ಷನ್

ಅಡಿಗೆ ಮನೆಯಲ್ಲಿ ಒಂದು ದಿನ ಪಂಕ್ಷನ್ ನಡೆದಿತ್ತು
ತರಕಾರಿಗಳೆಲ್ಲಾ ಸೇರಿಕೊಂಡು ಸಭೆಯು ನಡೆಸಿತ್ತು.
ಕುಂಬಳಕಾಯಿ ಮುಂದೆ ಬಂದು ಕುರ್ಚಿ ಎಳೆದಿತ್ತು
ತಾನೇ ಅಧ್ಯಕ್ಷ ಎಂದು ಹೇಳಿ ಕುಳಿತೇ ಬಿಟ್ಟಿತ್ತು.
॥ ಅಡಿಗೆ ಮನೆಯಲ್ಲಿ ॥

ಸಂಬಾರ ಸೊಪ್ಪು ಎಲ್ಲರಿಗೂ ಸ್ವಾಗತ ಬೀರಿತ್ತು
ಸೊಪ್ಪುಗಳೆಲ್ಲಾ ಸೇರಿಕೊಂಡು ಚಪ್ಪಳೆ ತಟ್ಟಿತ್ತು
ಕೆಂಬಡೆಕಾಯಿ ಕುಳಿತುಕೊಂಡು ತಬಲ ಬಾರಿಸಿತ್ತು
ಸೋರೆಕಾಯಿ ನಿಂತುಕೊಂಡು ಓಲಗ ಊದಿತ್ತು.
॥ ಅಡಿಗೆ ಮನೆಯಲ್ಲಿ ॥

ಬಾಳೆ ಹಣ್ಣು ಬಟ್ಟೆ ಬಿಚ್ಚಿ ನಾಟ್ಯ ಮಾಡಿತ್ತು
ಟೊಮೆಟೊ ಹಣ್ಣು ತಾನೇ ಚೆಲುವೆ ಎಂದು ಜಂಭ ಕೊಚ್ಚಿತ್ತು
ಚೋಟುದ್ದ ಮೆಣಸಿನಕಾಯಿ ಗತ್ತು ತೋರಿಸಿತ್ತು
ಎಲ್ಲರಿಗಿಂತ ತಾನೇ ಮೇಲು ಎಂದು ಭಾಷಣ ಬಿಗಿದಿತ್ತು.
॥ ಅಡಿಗೆ ಮನೆಯಲ್ಲಿ ॥

ಬದನೆಕಾಯಿ ಮಿಂಚಿಕೊಂಡು ಎದುರಿಗೆ ನಿಂತಿತ್ತು
ಹಗಲಕಾಯಿ ಸಪ್ಪೆಮಾಡಿ ಮೂಲೆಲ್ಲಿ ನಿಂತಿತ್ತು
ಈರುಳ್ಳಿಯಣ್ಣ ಅತ್ತುಕೊಂಡು ಮೂಲೆಲಿ ಕೂತಿತ್ತು.
॥ ಅಡಿಗೆ ಮನೆಯಲ್ಲಿ ॥

ಅಕ್ಕಿ ಬೆಲ್ಲ ಸೇರಿಕೊಂಡು ಪಾಯಸ ಮಾಡಿತ್ತು
ಬಾಳೆಅಣ್ಣ ಎಲ್ಲರಿಗೂ ಬಾಳೆಲೆ ಹಾಸಿತ್ತು
ಎಲ್ಲ ಸೇರಿಕೊಂಡು ಕೂಡಿ ಊಟ ಮಾಡಿತ್ತು
ಸೊಪ್ಪು ಮಾತ್ರ ಎಲ್ಲರಿಗಿಂತ ತಾನೇ ಮೇಲೆಂದಿತ್ತು.
॥ ಅಡಿಗೆ ಮನೆಯಲ್ಲಿ ॥

○ ಬಾರನ ಗಣಪತಿ ಶ್ವೇತಾ,

## ಅಂತರ

ಹಿಂದಿನವರು ಮಾಡುತ್ತಿದ್ದರು
ಮಕ್ಕಳನ್ನು ಪಡೆಯಲು ಯಾಗ
ಇಂದಿನವರು ಮಾಡುತ್ತಿದ್ದಾರೆ
ಮಕ್ಕಳನ್ನು ತಡೆಯಲು ಪ್ರಯೋಗ.

❁ ಕಾನೆಹಿತ್ಲು ನಳಿನಿ ನಂಜಪ್ಪ,
ಕುಶಾಲನಗರ.

## ಜೋಕರ್ ಪ್ಲಾನ್

ಯಾರ್ ನನ್ನ ಚಡ್ಡಿ ಕದ್ದೋರೋ
ಕರಿಯದಲ್ಲ ಬಿಳಿಯದಲ್ಲ ಪಟ್ಟೆ ಪಟ್ಟೆದು
ಮೊನ್ನೆ ಹಬ್ಬಕೊಳ್ಸಿದು, ಮೊನ್ನೆ ಮೇಳಕೊಳ್ಸಿದು
ವಿಷ್ಣುವರ್ಧನ ಅಂಬರೀಶ ಕೇಳಿಕೊಂಡಿದ್ರು
ಕೊಡೋಲ್ಲ ಅಂದಾಗ ಬೇಸರಗೊಂಡಿದ್ರು
ಮುಖ್ಯಮಂತ್ರಿ ಚಂದ್ರು ಅವರ ಅಳತೆಗೊಳ್ಸಿದ್ದು
ಯಾರ್ ನನ್ನ ಚಡ್ಡಿ ಕದ್ದೋರೋ

ಕರಿಯದಲ್ಲ ಬಿಳಿಯದಲ್ಲ ಪಟ್ಟೆ ಪಟ್ಟೆದು
ಮಾಲಾಶ್ರೀ ಸುಧಾರಾಣಿ ಕೇಳಿಕೊಂಡಿದ್ರು
ಕೊಡೋದಿಲ್ಲ ಅಂದಾಗ ಮುನಿಸಿಕೊಂಡಿದ್ರು
ಡಿಸ್ಕೋಶಾಂತಿ ಅವರ ಅಳತೆಗೊಳ್ಸಿದ್ದು
ಯಾರ್ ನನ್ನ ಚಡ್ಡಿ ಕದ್ದೋರೋ

ಕರಿಯ.ದಲ್ಲ ಬಿಳಿಯದಲ್ಲ ಪಟ್ಟೆ ಪಟ್ಟೆದು
ಕಪಿಲದೇವ ಶ್ರೀನಾಥ ಕೇಳಿಕೊಂಡಿದ್ರು
ಕೊಡೋದಿಲ್ಲ ಅಂದಿದಕ್ಕೆ ಹೊಡೆಯೋಕೆ ಬಂದಿದ್ರು
ಬಾಕ್ಸರ್ ಪೇಸ್‌ರವರ ಅಳತೆಗೊಳ್ಸಿದ್ದು
ಯಾರ್ ನನ್ನ ಚಡ್ಡಿ ಕದ್ದೋರೋ

ಕರಿಯದಲ್ಲ ಬಿಳಿಯದಲ್ಲ ಪಟ್ಟೆ ಪಟ್ಟೆದು
ಬೆಂಗಳೂರು ಕಿಡ್ಸ್‌ಕಂಪನಿಯಲ್ಲಿ ಕೊಂಡುಕೊಂಡಿದ್ದು
ಥಾನ್‌ನಲ್ಲಿ ಒಂದು ಮೀಟರ್ ಮಿಕ್ಕಿ ಉಳಿದದ್ದು
ಪ್ರಧಾನಮಂತ್ರಿ ದೇವೇಗೌಡ್ರ ಪ್ರೀತಿಗೊಳ್ಸಿದ್ದು
ಯಾರ್ ನನ್ನ ಚಡ್ಡಿ ಕದ್ದೋರೋ.

○ ವನಜಾಕ್ಷಿ (ಗೀತ), ಸುಳ್ಯ.

## ಜ್ಞಾಪಕದಲ್ಲಿಡಿ

❁ ಐಸ್‌ಕ್ರೀಮ್‌ನ ಸಂಶೋಧಕರು 'ಗೆರಾಲ್ಡ್ ಟೆಸಿಯನ್'
❁ ದೂರದರ್ಶನ ಸಂಶೋಧಕರು 'ಜಾನ್ ಲೋಗಿ ಬೇಯರ್ಡ್'
❁ ಡೀಸೆಲ್ ಇಂಜಿನ್ ಸಂಶೋಧಕರು 'ರುಡೊಲ್ಫ ಡಿಸ್ಸೆಲ್'
❁ ಕ್ಯಾಮರಾದ ರೋಲ್‌ಫಿಲ್ಮ್‌ನ್ನು ಸಂಶೋಧಿಸಿದವರು 'ಅಮೇರಿಕದ ಜಾರ್ಜ್ ಈಸ್ಟ್‌ಮನ್'
❁ ರೆಫ್ರಿಜರೇಟರ್‌ನ ಶೋಧಕ 'ಅಮೇರಿಕದ ಜೇಮ್ಸ್ ಹಾರ್‍ಸನ್.

○ ಸಂಗ್ರಹ : ಮುಜ್ಜಂಡ್ರ ವಾಣಿಗೋಪಾಲ,

# ಗೌಡರ ವಿವಾಹ ಪದ್ಧತಿಯ ಸೋಬಾನೆಗಳು

[ಮುಂದುವರೆದ ಭಾಗ]

**7. ಅಳಿಯನ ನೋಡುವ ಹಾಡು :**

ಚಾಣೆ ಕಲ್ಲಿನ ಮೇಲೆ ಸರಮುತ್ತು ಸುರಿಯೋನೆ ಚಂದ್ರ ಮಂಡಲ ಕೊಡೆ ಬಂತು ನಿಮ್ಮನೆಗೆ ಅತ್ತೆ ನೋಡುತ್ತೆ ಅಳಿಯಾನ ಚಾಣೆ ಕಲ್ಲಿನ ಮೇಲೆ ಸರಮುತ್ತು ಸುರಿಯೋ ಸೂರ್ಯ ಮಂಡಲದ ಕೊಡೆ ಬಂತು ಅತ್ತೆ ಅಳಿಯನ । ಚಪ್ಪರಕ್ಕೆ ದೀವಿಗ ಬೇಗ ತಂದಿರಿಸಿ ಅರ್ಕ ಮಂಡಲದ ಕೊಡೆಬಂತು ಅತ್ತೆ ನೋಡತ್ತೆ ಅಳಿಯನ । ಬಾಲಟ್ಟುವಾಗ ಘಂಟೆ ಬಾರಿಸುವಾಗ ಬಾಯಿಗೆ ಬಜೆ ಬೆಣ್ಣೆ ಕೊಡುವಾಗ ಆಗ ನೋಡಿದರೆ ಅಳಿಯನ । ಪುತ್ರ ನುಟ್ಟುವಾಗ ಬಟ್ಟಲು ಬಾರಿಸುವಾಗ ನಾನಾ ರಾಗಗಳು ನುಡಿಸು ವಾಗ ಆಗ ನೋಡಿದೆನೆ ಅಳಿಯಾನ । ಯಾವಾಗಲೂ ನಮ್ಮನೆಗೆ ಪಗಡೆಯಾಡಲಿಕ್ಕೆ ಬರುತ್ತಿದ್ದ ಆಗ ನೋಡಿದೆನೆ ಅಳಿಯನ । ನಿತ್ಯವಾಗಲು ನಮ್ಮನೆಗೆ ಚೆಂಡಾಟಾಡಲಿಕ್ಕೆ ಬರುತ್ತಿದ್ದ ಆಗ ನೋಡಿದನೆ ಅಳಿಯಾನ । ಅದೊಂದು ಹೆಚ್ಚೇನು ಇದೊಂದು ಕುಂದೇನು ಇದೊಂದು ದೋತ್ರ ಹೇಗಲಲ್ಲಿ ಇದೊಂದು ದೋತ್ರ ಹೆಗಲಲಿಟ್ಟದ್ದೀರಿ ಧಾರೆರೆದು ನೋಡಿ ಅಳಿಯಾನ । ಮಾಳಿಗೆ ಮನೆ ಕಂಡು, ಜೋಳಿಗೆ ಹೊನ್ನ ಕಂಡು ಅಳಿಯರಾಯರ ಗುಣ ಕಂಡು ಮೇಲಾದ ಮಗಳ ಕೊಡಬೇಕು ॥

**8. ಅ] ಬಣ್ಣ ಬಂಗಾರ ಬಳಸುವಾಗ ವರನ ಕಡೆಯಿಂದ ಹೇಳುವ ಹಾಡು :**

ಮುತ್ತಿನ ಚೆಂಡು ಮುವತ್ತು ನವಲಕ್ಕಿ ಹೋಗಿ ಮಾತಾಡುವ ಒಲಿ ಮಾಲೆ । ಹೋಗಿ ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೊಂದಿಸುವ ರೂಪಾ...ಗಳಾ ॥ ಹವಳದಾ ಚೆಂಡು ಹದಿನಾರು ನವಲಕ್ಕಿ ಕರೆದು ಮಾತಾಡುವ ಒಲಿಮಾಲೆ। ಕರೆದು ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೊಂದಿಸುವ ರೂಪಾ...ಗಳಾ । ಚಿನ್ನದ ಚೆಂಡು ಹನ್ನೆರಡು ನವಲಕ್ಕಿ ನಿಂತು ಮಾತಾಡುವ ಒಲಿಮಾಲೆ । ನಿಂತು ಮಾತಾಡುವ ಒಲಿಮಾಲೆ ಕಂಚಿಗೂ ಪ್ರದಿಂದೊಂದಿಸುವ ರೂಪಾ...ಗಳಾ ॥

ಹೋದ ಹೋದಲೆಲ್ಲಾ ಬಾಲಯ್ಯಗೆ ಗುಡಿ ಹೊಯಿಸಿ. ಬಾಲಯ್ಯಗೆ ಹಾಲ ಕೊಡೂ...ವಳು । ಬಾಲಯ್ಯಗೆ ಹಾಲ ಕೊಡುವಳು ಶೋಭಾನದವಳು ಸಾಗಿ ಶೋಭನಕ್ಕೆ ಬರಾ...ಹೇಳಿ। ನಿಂತನಿಂತಲೆಲ್ಲಾ ಕಂದಯ್ಯಗೆ ಗುಡಿಹೊಯಿಸಿ,ಕಂದಯ್ಯಗೆಹಾಲು ಕೊಡುವಳು । ಕಂದಯ್ಯಗೆ ಹಾಲು ಕೊಡುವಳು ಶೋಭಾನ ದವಳು ಸಾಗಿ ಶೋಭಾನಕ್ಕೆ ಬರಾ...ಹೇಳಿ ॥ ಕೂತ ಕೂತಲೆಲ್ಲಾ ಪುತ್ರಯ್ಯಗೆ ಗುಡಿಹೊಯಿಸಿ ಪುತ್ರಯ್ಯಗೆ ಹಾಲು ಕೊಡು...ವಳು । ಪುತ್ರಯ್ಯಗೆ ಹಾಲ ಕೊಡುವಳು ಶೋಭಾನದವಳು ಸಾಗೀ ಶೋಭಾನಕ್ಕೆ ಬರಾ...ಹೇಳಿ ।

ಆ ಊರು ಮಳೆ ಬಂದು ಈ ಊರು ಹೊಳೆ ತುಂಬಿ ಗುತ್ತಿ ಸಾಗರದ ಹೊಸ ಮಳೆ । ಗುತ್ತಿ ಸಾಗರದ ಹೊಸ ಮಳೆ ಬಂದು ಮಾವನವರೇ ನಮಗೊಂದು ದೋಣಿ ಕಳೂ...ಗಿರಿ ॥

ನಮಗಿಲ್ಲದ ದೋಣಿ ನಾವೆಲ್ಲಿಂದ ಕಳುಗಾಲಿ ನಿಲ್ಲಲೀ ಜನರು ಹೊಳೆತಾವಾ.. ।

ಆ ಊರು ಮಳೆ ಬಂದು ಈ ಊರು ಕೆರೆ ತುಂಬಿ, ಗೋವೆ ಸಾಗರದ ಹೊಸಾ ಮಳೆ । ಗೋವೆ ಸಾಗರದ ಹೊಸ ಮಳೆ ಬಂದು ಮಾವನವರೇ ನಮಗೊಂದು ಚಿಮಣಿ ಕಳೂ...ಗಿರಿ ॥

ನಮಗಿಲ್ಲದ ಚಿಮಣಿ ನಾವೆಲ್ಲಿಂದ ಕಳುಗಾಲಿ ಮೆಲ್ಲಗೆ ಸಾಗಿ ಬರಾಹೇಳಿ । ಎಂದಾಗವರ ಮಾವ ಮುದ್ರಾದುಂಗುರವ ಕಳೂಗ್ಯಾರು ॥

ಗದ್ದೆ ಏರಿಯ ಮೇಲೆ ಇರುವೆ ಸಾಲಿಟ್ಟಂತೆ ದಿಬ್ಬಣ ನಿಮ್ಮನೆಗೆ ಬರುತೇವೆ । ದಿಬ್ಬಣ ನಿಮ್ಮನೆಗೆ ಬರುತೇವೆ ಮಾವ ನನರೇ ನಮಗೊಂದು ಹೊತ್ತೆ ಕಳೂ...ಗಿರಿ ॥

ನಮಗಿಲ್ಲದ ಹೊತ್ತೆ ನಾವೆಲ್ಲಿಂದ ಕಳುಗಾಲಿ ಕನ್ನೆವರ ಓಲೆ ಬೆಳಕಲ್ಲಿ ಬರಾ...ಹೇಳಿ ॥

ಗದ್ದೆ ಏರಿಯ ಮೇಲೆ ಗುಬ್ಬಚ್ಚಿ ಸಾಲಿಟ್ಟಂತೆ ದಿಬ್ಬಣ ನಿಮ್ಮನೆಗೆ ಬರುತೇವೆ । ದಿಬ್ಬಣ ನಿಮ್ಮನೆಗೆ ಬರುತೇವೆ ಮಾವ ನನರೇ ನಮಗೊಂದು ಹೊತ್ತೆ ಕಳೂ...ಗಿರಿ ॥

ನಮಗಿಲ್ಲದ ಹೊತ್ತೆ ನಾವೆಲ್ಲಿಂದ ಕಳುಗಾಲಿ । ನೇತ್ರೆವರ ಕೊಪ್ಪಿನ ಬೆಳಕಲಿ ಬರಾ...ಹೇಳಿ ॥

ದೂರದ ದಿಬ್ಬಣ ಧೂಳೆದ್ದು ನಾವು ಬಂದು ಗುಡ್ಡೆಯ ನವಿಲೆಲ್ಲಾ ಬೆದರಿ ಬೆಟ್ಟನ ಸೇರಿ ಒಪ್ಪತ್ತಿನ ಊಟ ತಡವಾದೊ ಹತ್ತಿರದ ದಿಬ್ಬಣ ಹತ್ತಿಳಿದು ನಾವು ಬಂದು ಹಟ್ಟಿಯ ದನವೆಲ್ಲಾ ಬೆದರಿಯಾವು । ಹಟ್ಟಿಯ ದನವೆಲ್ಲ ಬೆದರಿ ಬೆಟ್ಟವ ಸೇರಿ ಒಂದೊತ್ತಿನ ಮೇವು ತಡವಾದೊ ॥

ಹತ್ತನಾರದ ಘಟ್ಟವ ಹತ್ತಿತು ನಮ್ಮ ದಿಬ್ಬಣ, ಹತ್ತು ಕೊಪ್ಪರಿಕೆ ಬಿಸಿ ಸೀರು । ಹತ್ತು ಕೊಪ್ಪರಿಕೆ ಬಿಸಿ ನೀರು ಬಾಳೆಯ ಹಣ್ಣು ಬಚ್ಚಲು ಮನೆಲಿಡಾ ಹೇಳಿ ॥ ಇಳಿಯನಾರದ ಘಟ್ಟವ ಇಳಿದೀತು ನಮ್ಮ ದಿಬ್ಬಣ ಏಳು ಕೊಪ್ಪರಿಕೆ ಬಿಸಿ ನೀರು। ನಿಂಬೆಯ ಹಣ್ಣು ಬಚ್ಚಲ ಮನೇಲಿಡಾಹೇಳಿ ॥

[ಮುಂದುವರಿಯುವುದು]

# ಆರೋಗ್ಯ ಚಿಂತನ:

## ಮೂರ್ಛೆ ರೋಗ (ಫಿಟ್ಸ್)

ಮೂರ್ಛೆ ರೋಗದ ಬಗ್ಗೆ ಇಂದು ಜನರಲ್ಲಿ ಸಾಕಷ್ಟು ಮೂಢನಂಬಿಕೆಗಳಿವೆ. ಇದೊಂದು ಭೀಕರ, ವಾಸಿಯಾಗದ ಕಾಯಿಲೆಯೆಂದು ಜನ ಭಾವಿಸಿದ್ದಾರೆ. ಮೂರ್ಛೆ ರೋಗಿಗಳನ್ನು ಜನರು ಸಮಾಜದಿಂದ ಬೇರೆಯಾಗಿ ಕಾಣುತ್ತಾರೆ. ಇದು ತಪ್ಪು. ಮೂರ್ಛೆ ರೋಗ ಇಂದು ಸರಳ ಕಾಯಿಲೆಯಾಗಿದೆ. ಇದರ ವಿರುದ್ಧ ಪರಿಣಾಮಕಾರಿಯಾದ ಔಷಧಿಗಳಿದ್ದು, ರೋಗಿಯು ಗುಣಮುಖವಾಗಿ ಎಲ್ಲರಂತೆ ಬಾಳಲು ಸಾಧ್ಯ.

ಮೂರ್ಛೆ ರೋಗವನ್ನು ಕ್ರಮವಾದ ಹಾಗೂ ದೀರ್ಘ ಕಾಲದ ಔಷಧ ಸೇವನೆಯಿಂದ ಗುಣಪಡಿಸಬಹುದು. ಔಷಧವನ್ನು ಒಂದು ದಿನವೂ ಬಿಡದೆ ಕ್ರಮವಾಗಿ ಸೇವಿಸಬೇಕು. ಸಾಮಾನ್ಯವಾಗಿ ಐದು ವರ್ಷಗಳ ಕಾಲ ವೈದ್ಯರ ಸಲಹೆಯಂತೆ ಔಷಧವನ್ನು ತಪ್ಪದೆ ತೆಗೆದುಕೊಳ್ಳಬೇಕು.

**ಪ್ರಥಮ ಚಿಕಿತ್ಸೆ :**

ಒಬ್ಬರಿಗೆ ಮೂರ್ಛೆ ಬಂದಾಗ ಅವರನ್ನು ಒಂದು ಪಕಕ್ಕೆ ತಿರುಗಿಸಿ ಮಲಗಿಸಬೇಕು. ಇದರಿಂದ ಜೊಲ್ಲು ಶ್ವಾಸಕೋಶದೊಳಕ್ಕೆ ಹೋಗಿ ಪ್ರಾಣಾಪಾಯವಾಗುವುದನ್ನು ತಪ್ಪಿಸಬಹುದು. ಕೈಕಾಲು ಅದುರುವಾಗ ಅವಕ್ಕೆ ಏಟಾಗದಂತೆ ನೋಡಿಕೊಳ್ಳಬೇಕು. ಹಾಗೂ ಕೈಕಾಲುಗಳನ್ನು ಅದುಮಿ ಹಿಡಿಯಬಾರದು. ಕರವಸ್ತ್ರವನ್ನು ಉಂಡೆ ಮಾಡಿ ಅದನ್ನು ಸಾಧ್ಯವಾದರೆ ಹಲ್ಲುಗಳ ಮಧ್ಯೆ ಇಟ್ಟು ನಾಲಿಗೆ ಕಡಿದುಕೊಳ್ಳದಂತೆ ಮಾಡಿ ಪ್ರಜ್ಞೆ ಮರಳಿ ಬರುವ ತನಕ ರೋಗಿಯ ಪಕ್ಕದಲ್ಲಿದ್ದು ನೋಡಿಕೊಳ್ಳಬೇಕು.

ಮೂರ್ಛೆ ರೋಗಿಗಳು ವಾಹನಗಳನ್ನು ನಡೆಸಬಾರದು, ಈಜಲು ಹೋಗಬಾರದು. ಬೆಂಕಿಯ ಹತ್ತಿರ ಕೆಲಸ ಮಾಡಬಾರದು, ಚಲಿಸುವ ಯಂತ್ರಗಳು, ವಿದ್ಯುತ್ ಉಪಕರಣಗಳ ಸಮೀಪದಲ್ಲಿ ಕೆಲಸ ಮಾಡಬಾರದು. ಮರ ಅಥವಾ ಕಂಬ ಹತ್ತಿ ಕೆಲಸ ಮಾಡಬಾರದು. ಇವಿಷ್ಟನ್ನು ಬಿಟ್ಟು ಇವರು ಬೇರೆಲ್ಲ ಚಟುವಟಿಕೆಗಳಲ್ಲಿ ಇತರರಂತೆ ತೊಡಗಬಹುದು. ಮೂರ್ಛೆ ರೋಗಿಗಳು ಮದುವೆ ಆಗಬಹುದು. ಆದರೆ ಮದುವೆಗೆ ಮುನ್ನ ಕನಿಷ್ಠ ಒಂದು ವರ್ಷವಾದರೂ ಮೂರ್ಛೆ ಬರುವುದು ನಿಂತಿರಬೇಕು.

ಒಟ್ಟಿನಲ್ಲಿ ಮೂರ್ಛೆ ರೋಗ ವಾಸಿಯಾಗುವ ಕಾಯಿಲೆ. ಅದರ ಚಿಕಿತ್ಸೆಗೆ ಸಮೀಪದ ವೈದ್ಯರನ್ನು ಕಂಡು ಶೀಘ್ರದಲ್ಲಿ ಗುಣಮುಖರಾಗುವುದು ಎಲ್ಲರಿಗೂ ಕ್ಷೇಮ.

○ ಡಾ|| ಯಸ್. ಎಸ್. ಪ್ರವೀಣ, (ಎಂ.ಡಿ.)
ಮದೆ.

---

# ಧರ್ಮ

ರೈತನೊಬ್ಬ ಬಡತನದಲ್ಲಿ ಜೀವಿಸುತ್ತಿದ್ದ. ಎಷ್ಟು ದುಡಿದರೂ ಎರಡು ಹೊತ್ತಿನ ಊಟಕ್ಕೆ ಸಾಲದಾಗುತ್ತಿತ್ತು. ಒಂದು ದಿನ ತನ್ನ ಬಡತನದ ಬಗ್ಗೆ ಚಿಂತಿಸುತ್ತಾ ಆತ ಗದ್ದೆ ಉಳುಮೆ ಮಾಡುತ್ತಿದ್ದ. ಆಗ ನೇಗಿಲಿಗೆ ಏನೋ ಸಿಕ್ಕಿಕೊಂಡಂತಾಯಿತು. ಆ ಜಾಗವನ್ನು ಅಗೆದಾಗ ಅಲ್ಲೊಂದು ತಾಮ್ರದ ಮಡಿಕೆ ಕಂಡು ಬಂತು. ರೈತ ಕುತೂಹಲದಿಂದ ಅದರ ಮುಚ್ಚಳ ತೆಗೆದ. ಅತ್ಯಾಶ್ಚರ್ಯ! ಮಡಿಕೆಯ ತುಂಬಾ ಚಿನ್ನದ ನಾಣ್ಯಗಳಿದ್ದವು. ರೈತ ಸಂತೋಷದಿಂದ ಕುಣಿದಾಡಿದ. ಆಗೊಂದು ಅಶರೀರವಾಣಿ ರೈತನನ್ನು ಕುರಿತು ಹೀಗೆಂದಿತು—"ನಿನ್ನ ಭಾಗ್ಯದ ಬಾಗಿಲು ತೆರೆಯಿತು. ಆ ನಾಣ್ಯಗಳಲ್ಲಿ ಅರ್ಧದಷ್ಟು ನಿನ್ನ ನೆರಮನೆಯ ರೈತನಿಗೆ ನೀಡಿ ಉಳಿದದ್ದನ್ನು ನೀನು ಅನುಭವಿಸು." ರೈತ ಅಸಮಾಧಾನದಿಂದ ಹೀಗೆಂದ—"ಈ ನಾಣ್ಯಗಳು ನನ್ನ ಜಾಗದಲ್ಲಿ ಸಿಕ್ಕಿದ್ದರಿಂದ ನನಗೇ ಸೇರಬೇಕು. ಇದರಲ್ಲಿ ನೆರೆಮನೆಯ ರೈತನಿಗೆ ಪಾಲು ಕೊಡುವುದು ನ್ಯಾಯಸಮ್ಮತವಲ್ಲ." ಆಗ ಅಶರೀರವಾಣಿ ರೈತನಿಗೆ ಹೇಳಿತು—ಸರಿ, ನಿನಗೆ ಇಷ್ಟ ಬಂದಂತೆ ಮಾಡು.

ರೈತ ಈಗ ಸಿರಿವಂತನಾಗಿದ್ದ. ಒಂದು ದಿನ ಗದ್ದೆ ಉಳುಮೆ ಮಾಡುತ್ತಿದ್ದಾಗ ಅದೇ ಜಾಗದಲ್ಲಿ ಪುನಃ ನೇಗಿಲಿಗೆ ಏನೋ ಸಿಕ್ಕಿಕೊಂಡಿತು. ಆಸೆಯಿಂದ ಅಗೆದು ನೋಡಿದಾಗ ಹಿಂದೆ ಸಿಕ್ಕಿದ್ದಂತಹ ಮಡಿಕೆ. ಮುಚ್ಚಳ ತೆಗೆದಾಗ ಪಿಶಾಚಿಯೊಂದು ಹೊರಬಂದು ಹೀಗೆಂದಿತು—"ಇಂದಿನಿಂದ ನಿನ್ನ ಭಾಗ್ಯದ ಬಾಗಿಲು ಮುಚ್ಚಿಹೋಯಿತು. ಸಾಲು ಸಾಲು ಕಷ್ಟಗಳು ನಿನಗೆ ಎದುರಾಗಲಿವೆ" ರೈತ ಹೌಹಾರಿದ. ಆಗೊಂದು ಅಶರೀರವಾಣಿ ಹೀಗೆಂದಿತು—"ನಿನ್ನ ಎಲ್ಲಾ ಕಷ್ಟಗಳನ್ನು ನೀನೇ ಅನುಭವಿಸು." ದುಃಖದಿಂದ ರೈತನೆಂದ—"ಇದು ಅನ್ಯಾಯ. ಹಿಂದೆ ಚಿನ್ನದ ನಾಣ್ಯಗಳು ಸಿಕ್ಕಿದಾಗ ಅರ್ಧದಷ್ಟನ್ನು ನೆರೆಮನೆಯ ರೈತನಿಗೆ ನೀಡುವಂತೆ ಹೇಳಿದ್ದೆ. ಈಗೇಕೆ ಅರ್ಧದಷ್ಟು ಕಷ್ಟಗಳನ್ನು ಅವನಿಗೆ ನೀಡಲು ಹೇಳುತ್ತಿಲ್ಲ?"

ಅಶರೀರವಾಣಿ ಹೀಗೆಂದಿತು—"ಯಾವನು ತನ್ನ ಸುಖ, ಸಂಪತ್ತನ್ನು ಇನ್ನೊಬ್ಬರಿಗೆ ಹಂಚುತ್ತಾನೋ, ಅವನು ತನ್ನ ಕಷ್ಟಗಳನ್ನು ಇನ್ನೊಬ್ಬರಿಗೆ ಹಂಚುವ ಅಧಿಕಾರ ಪಡೆಯುತ್ತಾನೆ. ನೀನು ಅರ್ಧದಷ್ಟು ಚಿನ್ನದ ನಾಣ್ಯಗಳನ್ನು ನೆರೆಮನೆಯ ರೈತನಿಗೆ ನೀಡದಿದ್ದುದರಿಂದ ನಿನ್ನ ಕಷ್ಟಗಳಲ್ಲಿ ಅರ್ಧದಷ್ಟನ್ನು ಅವನಿಗೆ ನೀಡಲು ಸಾಧ್ಯವಿಲ್ಲ. ಇದೇ ಧರ್ಮ.

○ ಬಿ. ಕೆ. ಶ್ರೀಧರ, ಪುತ್ತೂರು.

## ಕೈಲ್ ಪೊಳ್ದ್ ಆಚರಣೆ

"ನಬಾರ್ಡ್ ಮತ್ತು ಕಾರ್ಪೊರೇಷನ್ ಬ್ಯಾಂಕ್ ಆಶ್ರಯದಲ್ಲಿ ಅವಂದೂರು ಶ್ರೀ ಗೋಪಾಲಕೃಷ್ಣ ರೈತರ ಒಕ್ಕೂಟದಲ್ಲಿ" ಸಾಂಪ್ರದಾಯಿಕ 'ಕೈಲ್ ಪೊಳ್ದ್' ಹಬ್ಬ ವನ್ನು ವಿಜೃಂಭಣೆಯಿಂದ 3–9–98 ರಂದು ನಡೆಸಲಾಯಿತು. ಅವಂದೂರು ಕಿರಿಯ ಪ್ರಾಥಮಿಕ ಶಾಲಾ ಆವರಣದಲ್ಲಿ ಜರುಗಿದ ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯಾಗಿ ಚೇರಂಬಾಣೆ ಹಿರಿಯ ಪ್ರಾಥ ಮಿಕ ಶಾಲಾ ಶಿಕ್ಷಕರಾದ ಸತೀಶ್‌ಕುಮಾರ್ ರವರು ಆಗಮಿಸಿದ್ದರು. ಅಧ್ಯಕ್ಷತೆಯನ್ನು ಕಾಳೇರಮ್ಮನ ಪಾಪಯ್ಯನವರು ವಹಿಸಿದ್ದರು. ರೈತ ಕೂಟದ ಅಧ್ಯಕ್ಷರಾದ ಪಟ್ಟಡ ಗಣಪತಿ, ಸಮಾಜ ಸೇವಕ ಪಟ್ಟಡ ಉಲ್ಲಾಸ, ಬೆಳ್ಯನ ಸುರೇಶ್, ಪಂಚಾಯಿತಿ ಸದಸ್ಯೆ ಕಡ್ಯದ ಪಾರ್ವತಿ ಇವರುಗಳು ವೇದಿಕೆಯಲ್ಲಿ ಆಸೀನರಾಗಿದ್ದರು.

ಬೆಳಿಗ್ಗೆ 9 ಗಂಟೆಗೆ ಆಟೋಟಗಳು ಪ್ರಾರಂಭವಾದವು, ವನಜರವರು ಪ್ರಾರ್ಥನೆ ಮಾಡಿದರು. ಪಟ್ಟಡ ಪೊನ್ನಪ್ಪನವರು ಸ್ವಾಗತಿಸಿದರೆ ಪಟ್ಟಡ ಮಾಚಯ್ಯನವರು ವಂದನಾರ್ಪಣೆ ಮಾಡಿದರು. ರಾಷ್ಟ್ರಗೀತೆಯೊಂದಿಗೆ ಅಂದಿನ ಸಭೆಯು ಮುಕ್ತಾಯವಾಯಿತು. ಶಾಲಾ ಕಾಲೇಜು ವಿದ್ಯಾರ್ಥಿಗಳು, ಅವಂದೂರು ಗ್ರಾಮದ ಮಹಿಳೆಯರು, ಮಹನೀಯರು ಮತ್ತು ಹೆರವನಾಡು ಗ್ರಾಮಸ್ಥರು ಅಧಿಕ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು. ಅಂದಿನ ವಿಶೇಷವೆಂದರೆ ಪುಟಾಣಿಗಳಿಗೂ, ಶಾಲಾ ಮಕ್ಕಳಿಗೂ, ಮತ್ತು ಮಹಿಳೆಯರಿಗೂ, ಮಹನೀಯರುಗಳಿಗೂ ಓಲಗ ಕುಣಿತವನ್ನು ವಿಶೇಷವಾಗಿ ಏರ್ಪಡಿಸಿದ್ದು ಎಲ್ಲರ ಮನ ಸೆಳೆಯುವಂತಿತ್ತು. ಅವಂದೂರಿನ ಯುವಕರ ಕಾರ್ಯವನ್ನು ಇಲ್ಲಿ ಶ್ಲಾಘಿಸಲಾಯಿತು.

○ ಪಟ್ಟಡ ರಶ್ಮಿ ಉಲ್ಲಾಸ,
ಅವಂದೂರು.

## ಸುಲಭೋಪಾಯ

ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ನೀವು ಇಟ್ಟಿರುವ ಉಳಿತಾಯ ಖಾತೆಗೆ ಶೇಕಡ 4.5 ರಂತೆ ಸಾಮಾನ್ಯವಾಗಿ 6 ತಿಂಗಳಿಗೊಮ್ಮೆ ಬಡ್ಡಿಯನ್ನು ಬ್ಯಾಂಕಿನವರು ಕೊಡುತ್ತಾರೆ. ಅವರು ಕೊಟ್ಟ ಬಡ್ಡಿ ಸರಿಯಾಗಿದಿಯೇ ಎಂಬುದನ್ನು ಪರೀಕ್ಷಿಸಲು ಒಂದು ಸುಲಭ ವಿಧಾನವನ್ನು ನಿಮಗೆ ತಿಳಿಸುತ್ತಿದ್ದೇನೆ.

1. ಮೊದಲು, ಪ್ರತಿತಿಂಗಳ 10ನೇ ತಾರೀಖಿನಿಂದ ಆ ತಿಂಗಳ ಕೊನೆಯವರೆಗೆ ನಿಮ್ಮ ಖಾತೆಯಲ್ಲಿದ್ದ ಕನಿಷ್ಠ ಮೊತ್ತವನ್ನು ಬರೆದುಕೊಳ್ಳಬೇಕು.

2. ಹೀಗೆ ಬರೆದುಕೊಂಡ 6 ತಿಂಗಳ ಕನಿಷ್ಠ ಮೊತ್ತವನ್ನು ಕೂಡಿಸಿ ನಂತರ **267** ರಿಂದ ಭಾಗಿಸಿದರೆ ನಿಮಗೆ ಸಿಗಬೇಕಾದ ಬಡ್ಡಿ ಎಷ್ಟೆಂದು ಕ್ಷಣದಲ್ಲಿ ನಿಮಗೆ ತಿಳಿಯುತ್ತದೆ.

ನೀವು ಇಟ್ಟಿರುವ ಹಣ ಒಂದು ಲಕ್ಷಕ್ಕಿಂತ ಜಾಸ್ತಿ ಇದ್ದರೆ 267ರ ಬದಲು 266.67 ರಿಂದ ಭಾಗಿಸಬೇಕಾಗುವುದು. ಬ್ಯಾಂಕಿನವರು ನಿಮಗೆ ಕೊಡುವ ಬಡ್ಡಿಯಲ್ಲಿ ಏನಾದರೂ ವ್ಯತ್ಯಾಸವಿದ್ದರೆ ಅದನ್ನು ಸರಿಪಡಿಸಿಕೊಳ್ಳುವ ಹಕ್ಕಂತು ನಿಮಗೆ ಇದ್ದೇ ಇದೆ. ನೀವು ಜಾಗ್ರತರಾದಷ್ಟು ಬ್ಯಾಂಕಿನವರು ಹೆಚ್ಚು ಮುತುವರ್ಜಿಯಿಂದ ಕೆಲಸ ನಿರ್ವಹಿಸುತ್ತಾರೆ. ಬ್ಯಾಂಕಿನಲ್ಲಿ ಆಗಾಗ ಭೇಟಿಕೊಟ್ಟು ತಮ್ಮ ಸಮಸ್ಯೆಯನ್ನು ನಿವಾರಿಸಿಕೊಂಡರೆ ಬ್ಯಾಂಕಿನವರು ಪ್ರಸನ್ನರಾಗುವರು.

○ ಉಳುವಾರನ ಸುರೇಶ್ ಕುಮಾರ್
ನಿಪ್ಪಾಣಿ.



## ಉದ್ಯೋಗವಾರ್ತೆ :

ಭಾರತೀಯ ಗಡಿ ಭದ್ರತಾ ಪಡೆಯಲ್ಲಿ ಖಾಲಿಇರುವ 190 ಕಾನ್‌ಸ್ಟೇಬಲ್ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ.

ಅಭ್ಯರ್ಥಿಗಳು ಕನಿಷ್ಠ S.S.L.C. ಪಾಸಾಗಿರಬೇಕು. ದಿನಾಂಕ 1–1–99ಕ್ಕೆ 18 ರಿಂದ 22 ವರ್ಷ ವಯೋಮಿತಿಯೊಳಗಿರಬೇಕು. 167.5 ಸೆ.ಮೀ. ಎತ್ತರ, ಎದೆಯ ಸುತ್ತಳತೆ 80 ರಿಂದ 85 ಸೆ.ಮೀ. ಹಾಗೂ ತೂಕ 49 ಕೆ.ಜಿ ಇರಬೇಕು.

ನೇಮಕಾತಿ ಅಕ್ಟೋಬರ್ 5 ರಂದು ಮಡಿಕೇರಿಯ ಪೊಲೀಸ್ ಲೈನ್ಸ್‌ನಲ್ಲಿ ನಡೆಯಲಿದೆ. ಅಭ್ಯರ್ಥಿಗಳನ್ನು ದೈಹಿಕ ಹಾಗೂ ಲಿಖಿತ ಪರೀಕ್ಷೆಗಳ ಮೂಲಕ ಆಯ್ಕೆ ಮಾಡಲಾಗುವುದು.

ಅರ್ಜಿ ನಮೂನೆ ಹಾಗೂ ಹೆಚ್ಚಿನ ವಿವರಗಳನ್ನು ಜಿಲ್ಲಾ ಉದ್ಯೋಗ ಅಧಿಕಾರಿ, ಮಂಡ್ಯ ಇವರಿಂದ ಪಡೆಯಬಹುದು.

## ಡ್ಯಾಡಿ

ಡ್ಯಾಡಿ, ಡ್ಯಾಡಿ, ಡ್ಯಾಡಿ
ಅಮ್ಮಂಗೆ ಒಂದು ಜೋಡಿ
ಮಕ್ಕಳು ಕರೆಯುವುದು ನೋಡಿ
ಸಂಸಾರಕ್ಕೆ ಒಂದು ಗಾಡಿ
ಎಳೆದರು ಬಂಡಿಯ ಡ್ಯಾಡಿ
ತಪ್ಪಿತು ಗಾಡಿಯ ಲಾಡಿ
ದೊಪ್ಪನೆ ಬಿದ್ದರು ಜಾರಿ
ಅಮ್ಮನ ಒಮ್ಮೆಗೆ ನೋಡಿ
ಕಂಬನಿ ಇತ್ತರು ದೇವರ ಬೇಡಿ
ಮಕ್ಕಳು ಅರಚಿದರು ಡ್ಯಾಡಿ ಡ್ಯಾಡಿ...

ಅಜಡ್ಕ ರಾಣಿ ಬಾಲಕೃಷ್ಣ,
ಕುಶಾಲನಗರ.

## ಸಂಗಾತಿ ಪದಬಂಧ-5

| | | | | | | | | | | |
|---|---|---|---|---|---|---|---|---|---|---|
| 1 | | | | 2 | ■ | 3 | | | | 4 |
| | ■ | ■ | ■ | | ■ | | ■ | ■ | ■ | |
| 5 | | | 6 | | ■ | 7 | 8 | | | |
| ■ | ■ | ■ | | ■ | 9 | ■ | | ■ | ■ | ■ |
| ■ | 10 | ■ | | ■ | | ■ | | ■ | 11 | ■ |
| ■ | | ■ | 12 | | | | | ■ | | ■ |
| 13 | | | | ■ | | ■ | 14 | | | |
| ■ | ■ | ■ | | ■ | ■ | ■ | | ■ | ■ | ■ |
| 15 | | | | 16 | ■ | 17 | | | | 18 |
| | ■ | ■ | ■ | | ■ | | ■ | ■ | ■ | |
| 19 | | | | | ■ | 20 | | | | |

### ಎಡದಿಂದ ಬಲಕ್ಕೆ

1 ಮೊದಲಲ್ಲಿ 'ಆನೆ'ಯನ್ನು ಹೊಂದಿರುವ ಗಣಪತಿ–5

3 ಅವನು ಸರ್ವಾಧಿಕಾರವುಳ್ಳ ಒಡೆಯ–5

5 ಮಂಗಳ ಪ್ರಸಂಗಗಳಲ್ಲಿ ಮುಂಗೈಗೆ ಕಟ್ಟುವ ದಾರ–5

7 ಐದಕ್ಷರದ 'ಹೆಂಗಸರು'–5

12 'ಸಭೆ' ಎಂಬರ್ಥ ನೀಡುವ ಪದ ಬಲದಿಂದ ಎಡಕ್ಕೆ–5

13 ಶ್ವೇತ ಬಣ್ಣದ ಶುಕ-4

14 ಭಾಷೆಗೆ ವಿಶಿಷ್ಟವಾದ ಮಾತಿನ ಜೋಡಣೆ–4

15 'ವಿಮರ್ಶೆ' ಎಂಬರ್ಥ ನೀಡುವ ಶಬ್ದ–5

17 ಇನ್ನೊಂದು 'ಅವಮಾನ'–5

19 'ಹೊಸ ಮುಖಂಡ' ಒಂಬತ್ತು ಜನರಿಂದ ಆರಿಸಲ್ಪಟ್ಟವನೇ ?–5

20 ಬುದ್ಧಿಗೆಟ್ಟವನಿಗೆ ಇನ್ನೊಂದು ಹೆಸರು–5

### ಮೇಲಿನಿಂದ ಕೆಳಕ್ಕೆ

1 ಕಣ್ಣಿಗೆ ಕಾಣಿಸಿದ ದೇವರು–3

2 ಯಾವ ಕಡೆಯಿಂದ ಓದಿದರೂ ಇದು ಕಣ್ಣು–3

3 ಮೂರಕ್ಷರದ 'ತುಂಬು'–3

4 ಕಳ್ಳರು ಅಪಹರಿಸಿದ 'ತೆನೆ'–3

6 ತೀರ ಹತ್ತಿರದ ಸಂಬಂಧವನ್ನು ಹೇಳುವಾಗ ಬಳಕೆಯಾಗುವ ಪದ ಕೆಳಗಿನಿಂದ ಮೇಲೇರಿದೆ–7

8 'ಇಂದಿಗೆ ಹಿಂದಿನ ದಿನದ ಅನುಭವ'ವನ್ನು ಕೊಂಚ ಬದಲಿಸಿ ಹೀಗೆ ಹೇಳೋಣ–7

9 ನಾಲ್ಕಕ್ಷರದ 'ವೇಷಾಂತರ'–4

10 ವಾಸು ಚೆನ್ನಾಗಿ ಮಾತನಾಡುವವನು–3

11 ಮೂರಕ್ಷರದ 'ಬಾಲಕ'–3

15 ಧರ್ಮರಾಯನ ತಮ್ಮ–3

16 ನರ್ತಕಿಗೆ ಚಳಿ ಬಂದಾಗ ಉಂಟಾದ್ದದ್ದು–3

17 ಅನೇಕರಿಗೆ ಹಿತವಾಗಿಲ್ಲದ್ದು–3

18 'ಪಾಪಿ' ಎಂದೊಡನೆ ನೆನಪಾಗುವ ಸ್ಥಳ-3

ರಚನೆ : ಬೈತಡ್ಕ ಶ್ರೀಧರ, ಪುತ್ತೂರು.

## ಪದಬಂಧ 4ರ ಉತ್ತರ

### ಎಡದಿಂದ ಬಲಕ್ಕೆ

1 ಜನಜೀವನ 3 ನವಸಾಗರ

5 ಕಡೆಗಣಿಸು 7 ಸುಖಜೀವನ

10 ದನ 11 ಕವಿ

12 ಗಜವದನ 13 ರಾಮ

14 ಬೆಂಕಿ 15 ಸಮಕಾಲೀನ

17 ಸಮತೋಲನ 19 ಯಮಕಿಂಕರ

20 ನವಸಂಧಾನ

### ಮೇಲಿನಿಂದ ಕೆಳಕ್ಕೆ

1 ಜನಕ 2 ನನಸು 3 ನಗಿಸು

4 ರಗನ 6 ಡೆಕೊನಗಮದುಮ

8 ವರ್ತಕರ ಬೆಂಬಲ 9 ಕಾಮನಬಿಲ್ಲು

15 ಸಹಾಯ 16 ನಶ್ವರ

17 ಸಜ್ಜನ 18 ನಮನ

# ಹುಲಿ ಬೇಟೆ

ಇದು ಸುಮಾರು 25 ವರ್ಷಗಳ ಹಿಂದಿನ ನೆನಪು. ಮನೋರಂಜನೆಗಾಗಿ ಬ್ರಿಟೀಷರು ಹುಲಿಗಳನ್ನು ನಿರ್ಭಯವಾಗಿ, ನಿರ್ದಯವಾಗಿ ಕೊಂದುಹಾಕಿದ್ದರೂ, ಕೊಡಗಿನ ಕಾಡುಗಳಲ್ಲಿ ಸಾಕಷ್ಟು ಉಳಿದುಕೊಂಡಿದ್ದ ಕಾಲ. ಆಗ ಹುಲಿಯ ಬೇಟೆಗೆ ಇಷ್ಟೊಂದು ನಿರ್ಬಂಧ ಇರಲಿಲ್ಲ. ಹುಲಿ ಕೊಂದವನಿಗೆ ಜೈಲು ಶಿಕ್ಷೆ ಇರಲಿಲ್ಲ. ಅವನು 'ಹೀರೋ' ಆಗಿ ಹುಲಿ ಮದುವೆ ಮಾಡಿಸಿಕೊಂಡು ರಟ್ಟೆಗಾತ್ರದ ಮೀಸೆ ಬಿಟ್ಟು ಮೆರೆಯುತ್ತಿದ್ದ ಕಾಲ.

ಬೆಟ್ಟದ ತಪ್ಪಲಿನಲ್ಲಿರುವ ನಮ್ಮ ಗ್ರಾಮದ ದನಗಳು ಮೇಯಲು ಬೆಟ್ಟಕ್ಕೆ ಹೋಗುತ್ತಿದ್ದವು. ಕೆಲವರು ಸಾಯಂಕಾಲ ಬೆಟ್ಟದಿಂದ ತಮ್ಮ ದನಕರುಗಳನ್ನು ಕೊಟ್ಟಗೆಗೆ ಅಟ್ಟಿಸಿಕೊಂಡು ಬರುತ್ತಿದ್ದರು. ಕೆಲವರು ಉದಾಸೀನರಾಗಿ ಅಲ್ಲೇ ಮೇಯ್ದುಕೊಂಡಿರಲು ಬಿಡುತ್ತಿದ್ದರು ಕಾಡಿನಲ್ಲಿ ಹುಲಿಗಳಿದ್ದವು. ಆದರೆ ಸಾಮಾನ್ಯವಾಗಿ ಮೇಯಲು ಬಂದ ದನಕರುಗಳನ್ನು ಕೊಲ್ಲುತ್ತಿರಲಿಲ್ಲ. ಒಮ್ಮೊಮ್ಮೆ ಗಬ್ಬದ ಹಸುವನ್ನೋ, ಕೊಬ್ಬಿದ ಎತ್ತನ್ನೋ ತಿರುಕ ಹುಲಿ ಕೊಂದುಬಿಡುತಿತ್ತು. ಆಗ ಊರವರು ನಾಲ್ಕೈದು ದಿನ ದನಗಳ ಜೊತೆ ಹೋಗಿ ಬೊಬ್ಬೆ ಮಾಡಿ ಹುಲಿ ದೂರ ಹೋಗಿ ಬಿಡುವಂತೆ ಮಾಡುತ್ತಿದ್ದರು.

ಬೈತಡ್ಕ ಹೇನು ಕುಂಜಪ್ಪ, ಪುತ್ತೂರು.

ಆ ವರ್ಷ ನವೆಂಬರ್ ತಿಂಗಳ ಸಮಯ. ತಿಮ್ಮಯ್ಯನ ಗಬ್ಬದ ಬಸುವನ್ನು ಹುಲಿ ಕೊಂದಿತ್ತು. ಅದು ಉತ್ತಮ ಜಾತಿಯ ಕಪಿಲೆ (ಕಬಲೆ) ಹಸು. ಮನೆಯವರಿಗೆ ತುಂಬ ದುಃಖವಾಗಿತ್ತು. ಊರವರು ಕಾಡಿಗೆ ಹೋಗಿ ಹುಲಿಯನ್ನು ಓಡಿಸುವ ಮಾಮೂಲಿ ಕ್ರಮಗಳನ್ನು ಮಾಡಿದರು. ಆದರೆ 8 ದಿನಗಳಲ್ಲಿ ಮತ್ತೆ ಅದೇ ಜಾಗದಲ್ಲಿ ಕೃಷ್ಣಪ್ಪನ ಎತ್ತನ್ನು ಹುಲಿ ಕೊಂದು ಹಾಕಿತು. ಆದರೂ ಊರವರು ವಿಷಯವನ್ನು ಗಂಭೀರವಾಗಿ ಪರಿಗಣಿಸಲಿಲ್ಲ. 20 ದಿನಗಳ ನಂತರ ಊರಿನ ಪಟೇಲರ ಎತ್ತನ್ನು ಹೆಚ್ಚುಕಡಿಮೆ ಅದೇ ಜಾಗದಲ್ಲಿ ಹುಲಿ ಕೊಂದು ತಿಂದಿತು. ಈಗ ಎಲ್ಲರಿಗೂ ಚಿಂತೆಯಾಯಿತು. ಹೀಗೆ ಬಿಟ್ಟರೆ ಮುಂದಿನ ವರ್ಷ ಭೂಮಿ ಕೆಲಸಕ್ಕೆ ಊರಿನಲ್ಲಿ ಒಂದು ಎತ್ತೂ ಉಳಿಯಲಾರದೆಂದು ಭಾವಿಸಿದರು. ಈ ಹುಲಿಯನ್ನು ಕೊಲ್ಲುವುದೇ ಒಳ್ಳೆಯದೆಂಬ ನಿರ್ಣಯಕ್ಕೆ ಬಂದರು.

ಹುಲಿ ಬೇಟೆಯಲ್ಲಿ ಪೊನ್ನಪ್ಪ ನಿಪುಣ. ಮನೆಗೆ ಮೂರು ಕೋವಿ ಇದೆ. 10 ವರ್ಷದ ಹುಡುಗ ಕೂಡ ಗುಂಡು ಹೊಡೆಯಬಲ್ಲ. ಹಕ್ಕಿಯನ್ನೋ, ಮೊಲವನ್ನೊ ಹೊಡೆಯುವುದು ಸುಲಭ. ಆದರೆ ಹುಲಿಯನ್ನು ಕೊಲ್ಲುವ ವಿಷಯ ಬೇರೆ. ಇದು ತುಂಬ ಬಲಿಷ್ಠ ಮತ್ತು ಜಾಗರೂಕ ಪ್ರಾಣಿ. ಗುರಿ ಸ್ವಲ್ಪ ತಪ್ಪಿದರೂ ಗುಂಡು ಹೊಡೆದವನ ಪ್ರಾಣಕ್ಕೇ ಅಪಾಯ. ಹುಲಿ ಬೇಟೆಗಾರನಿಗೆ ಚಾಣಾಕ್ಷತನ ಬೇಕು. ತಾಳ್ಮೆ ಬೇಕು. ಗಂಡದೆ ಬೇಕು. ಅರ್ಜುನನ ಗುರಿ ಬೇಕು. ಪೊನ್ನಪ್ಪನಲ್ಲಿ ಇದೆಲ್ಲ ಇತ್ತು. ಹಿಂದೆ ಕೀಟಲೆ ಕೊಟ್ಟ ಹುಲಿಗಳನ್ನು ಕೊಂದ ಅನುಭವಿ ಇವರು. ಬೇಟೆಗಾರನೆಂದು ನೆರೆಯ ಊರುಗಳಲ್ಲಿ ಮನ್ನಣೆ ಪಡೆದವರು. ಇನ್ನು ಈ ಹುಲಿಯನ್ನು ಬಿಟ್ಟಾರೆಯೇ ?

ಹಿರಿಯರ ಕೋರಿಕೆಯಂತೆ ಈ ಹುಲಿಯನ್ನು ಮುಗಿಸಲು ಮುಂದಾದರು ಪೊನ್ನಪ್ಪ. ಕೆಲಸದವನ ಜೊತೆಯಲ್ಲಿ ಎತ್ತು ಬಿದ್ದಿದ್ದ ಸ್ಥಳಕ್ಕೆ ಹೋಗಿ ಪರಿಶೀಲಿಸಿದರು. ಎತ್ತಿನ ಕಳೇಬರವನ್ನು ತಿಂದ ರೀತಿ, ತಿಂದ ಪ್ರಮಾಣ ಮೊದಲಾದುವುಗಳನ್ನು ಗಮನಿಸಿ ಅದು ದೊಡ್ಡ ಯೌವನದ ಹುಲಿಯೇ ಇರಬೇಕೆಂದು ನಿರ್ಧರಿಸಿದರು. ಹುಲಿ ತಿನ್ನಲು ಇನ್ನೂ ಸಾಕಷ್ಟು ಉಳಿಸಿ ಹೋಗಿತ್ತು. ಇದನ್ನು ನೋಡಿ, ಮತ್ತೆ ತಿನ್ನಲು ಬಂದಾಗ ಸುಲಭವಾಗಿ ಹೊಡೆದುಹಾಕಬಹುದೆಂದು ಯೋಚಿಸಿದರು. ಅಮಾವಾಸೆಗೆ 2-3 ದಿನಗಳು ಮಾತ್ರ ಬಾಕಿ ಇದ್ದುದರಿಂದ ಹೊಂಚು ಹಾಕಿ ಕೂರಲು [ಒಳಿ ಕೂರಲು] ಒಳ್ಳೆಯ ಅವಕಾಶವೂ ಇತ್ತು. "ಈ ದಿನವೇ ಒಳ್ಳೆಯದು" ಎಂದು ಯೋಚಿಸಿ ಆಳನ್ನು ಊರಿಗೆ ಕಳುಹಿಸಿ ಹೆಚ್ಚಿನ ಆಳುಗಳನ್ನು ಕರೆಸಿಕೊಂಡರು. ಮುಸ್ಸಂಜೆಗೆ ಮೊದಲೇ ಕುಳಿತುಬಿಡಬೇಕೆಂದು ಎಲ್ಲಾ ಏರ್ಪಾಡು ಮಾಡತೊಡಗಿದರು.

ಒಂದು ಅನುಕೂಲಕರವಾದ ಮರವನ್ನು ಆರಿಸಿ ಸಾಕಷ್ಟು ಎತ್ತರದಲ್ಲಿ ಅಟ್ಟಣಿಕೆ ನಿರ್ಮಿಸಿದರು. ಆ ಸ್ಥಳದಿಂದ ಎತ್ತಿನ ಕಳೇಬರ ಚೆನ್ನಾಗಿ ಕಾಣುವಂತಿತ್ತು. ಆದರೆ ಕಳೇಬರದ ಬಳಿ ನಿಂತರೆ ಅಟ್ಟಣಿಕೆಯಲ್ಲಿರುವವರು ಕಾಣುತ್ತಿರಲಿಲ್ಲ. ಟಾರ್ಚ್‌ನ ಬೆಳಕು ಅಟ್ಟಣಿಕೆಯ ಮೇಲಿನಿಂದ ಕಳೇಬರದ ಮೇಲೆ ಸರಿಯಾಗಿ ಬೀಳುವಂತೆ ವ್ಯವಸ್ಥೆ ಮಾಡಿದರು.

ಸಾಮಾನ್ಯವಾಗಿ ಹುಲಿ ಮುಸ್ಸಂಜೆಗೆ ಮಬ್ಬುಗತ್ತಲು ಆವರಿಸುವಾಗ ಕೊಂದ ಪ್ರಾಣಿಯನ್ನು ತಿನ್ನಲು ಬರುವ ರೂಢಿ ಪೊನ್ನಪ್ಪನಿಗೆ ಚೆನ್ನಾಗಿ ಗೊತ್ತಿತ್ತು. ಮುಸ್ಸಂಜೆಗೆ ಬಾರದಿದ್ದರೆ ಮತ್ತೆ ಬೆಳಗಾಗುವ ಮೊದಲು ರಾತ್ರಿ ಎಷ್ಟು ಹೊತ್ತಿಗೆ ಅದು ಬರುತ್ತದೆಂದು ಹೇಳಲು ಸಾಧ್ಯವಿಲ್ಲ. ಆದಕಾರಣ ಅವರು ಪೂರ್ಣ ತಯಾರಿಯೊಂದಿಗೆ ಮುಸ್ಸಂಜೆಗೆ ಸಾಕಷ್ಟು ಮೊದಲೇ ಬಂದು ಅಟ್ಟಣಿಕೆ ಏರಿ ಕುಳಿತುಕೊಂಡರು. ಇಂತಹ ಸಮಯ

ದಲ್ಲಿ ಯಾವಾಗಲು ಕರೆತರುತ್ತಿದ್ದ ಆಳನ್ನೇ ಕರೆತಂದಿದ್ದರು. ಬೇರೆ ಯಾರೇ ಹಠಮಾಡಿದರೂ ಅವರಿಗೆ ಅವಕಾಶ ಕೊಡುತ್ತಿರಲಿಲ್ಲ.

ಮುಸ್ಸಂಜೆ ಸರಿಯತೊಡಗಿತು. ಹುಲಿ ಸುಳಿಯಲಿಲ್ಲ. ಆದರೆ ಪೊನ್ನಪ್ಪ ನಿರಾಶರಾಗಲಿಲ್ಲ. ಬೆಳಗಾಗುವವರೆಗೂ ಕಾಯುವ ಸಿದ್ಧತೆಯಲ್ಲಿ ಅವರು ಬಂದಿದ್ದರು. ಸುಮಾರು 7-30 ಗಂಟೆಯ ಸಮಯಕ್ಕೆ ಕಳೇಬರದಿಂದ 5-6 ಅಡಿ ದೂರದಲ್ಲಿ ಒಂದು ಸಣ್ಣ ಕಡ್ಡಿ ಮುರಿದ ಸದ್ದು ಕೇಳಿತು. ತಲೆಯ ಮೇಲಿನ ಟಾರ್ಚನ್ನು ಸರಿಪಡಿಸಿ, ಡಬಲ್ ಬ್ಯಾರಲ್ ತೋಟದ ಕೋವಿಯನ್ನು ಎತ್ತಿ ಗುರಿ ಇಡಲು ಪೊನ್ನಪ್ಪ ತಯಾರಾದರು. ಆದರೆ ಮತ್ತೆ ಸದ್ದೇ ಇಲ್ಲ. ಆದರೆ 2-3 ನಿಮಿಷಗಳಲ್ಲಿ ಚಪ್ಪರಿಸುವ ಸದ್ದು ಕತ್ತಲಲ್ಲಿ ಕೇಳಿಬಂದಾಗ ಹುಲಿ ಮಾಂಸ ತಿನ್ನುತ್ತಿರುವುದು ಖಾತ್ರಿಯಾಯಿತು. ತಕ್ಷಣ ಹೆಡ್‌ಲೈಟ್ ಬೆಳಗಿಸಿ ಗುರಿ ಇಟ್ಟರು. ಆದರೆ ಕಣ್ಣಿಮೆಯಿಕ್ಕುವಷ್ಟರಲ್ಲಿ ಕಣ್ಣುಗಳೆರಡು ಕೆಂಡದಂತೆ ಮಿನುಗಿ ಮಾಯವಾಯಿತು. ಅಪಾಯದ ಸುಳಿವು ಸಿಕ್ಕಿದ ಹುಲಿ ಸದ್ದಿಲ್ಲದೆ ಕತ್ತಲಲ್ಲಿ ಪರಾರಿಯಾಗಿತ್ತು. ಪೊನ್ನಪ್ಪನವರಿಗೆ ತುಂಬ ನಿರಾಶೆಯಾಯಿತು. ಒಮ್ಮೆ ಓಡಿದ ಹುಲಿ ಮತ್ತೆ ಅದೇ ರಾತ್ರಿ ತಿನ್ನಲು ಅದೇ ಸ್ಥಳಕ್ಕೆ ಬರುವುದು ಅಪರೂಪವೆಂದು ಅವರಿಗೆ ಗೊತ್ತು. ಆದರೂ ಬೆಳಗಾಗುವವರೆಗೂ ಕುಳಿತರು. ನರಿಗಳು ಆಗಾಗ್ಗೆ ಬಂದು ಕಳೇಬರವನ್ನು ತಿನ್ನುತ್ತಿದ್ದವು. ಟಾರ್ಚ್ ಹಾಕಿದಾಗ ಓಡಿಹೋಗಿ ಮತ್ತೆ ಬರುತ್ತಿದ್ದವು. ಹುಲಿ ಮಾತ್ರ ಆ ಕಡೆ ಸುಳಿಯಲೇ ಇಲ್ಲ.

ಹುಲಿ ಆ ಕಾಡಿನಲ್ಲಿರುವುದು ಖಚಿತವಾಗಿತ್ತು. ಒಮ್ಮೆ ಟಾರ್ಚ್ ಬೆಳಕಿಗೆ ಹೆದರಿ ಓಡಿದ ಹುಲಿಗಾಗಿ ಮತ್ತೆ ಕಾಯುವುದು ಪ್ರಯೋಜನವಿಲ್ಲದ ಕೆಲಸವೆಂದು ಪೊನ್ನಪ್ಪನವರಿಗೆ ತಿಳಿದಿತ್ತು. ಉಳಿದ ಮಾರ್ಗ ಒಂದೆ. ಹಗಲು ಬೇಟೆಯಾಡುವುದು ಹಗಲು ಬೇಟೆಯಲ್ಲಿ ಹುಲಿ ಗುಂಡಿಗೆ ಸಿಕ್ಕಿದರೂ ಸಿಗಬಹುದು ಅಥವಾ ಹೆದರಿ ದೂರ ಓಡಿಹೋದರೂ ಹೋಗಬಹುದು. ಹೇಗೂ ಹುಲಿಯ ಕಾಟ ತಪ್ಪಿದರೆ ಸಾಕೆಂದು ಹಗಲು ಬೇಟೆಗೆ ನಿರ್ಣಯಿಸಿದರು.

ಊರಿನಲ್ಲಿ ಬೇಟೆನಾಯಿ, ಕೋವಿ ಇರುವವರಿಗೆ, ಬೇಟೆಯಲ್ಲಿ ಅನುಭವವಿರುವವರಿಗೆ ಈ ಹಗಲು ಬೇಟೆಯ ಸಂದೇಶ ಹೋಯಿತು. ಅದೇ ದಿನ ಅಪರಾಹ್ನ 2 ಗಂಟೆಯ ಸಮಯಕ್ಕೆ ಬೇಟೆ ಪ್ರಾರಂಭ ಮಾಡಲು ಎಲ್ಲ ತಯಾರಿ ನಡೆಯಿತು. ಯಾವ ಕಡೆಯಿಂದ ಬೇಟೆ ಪ್ರಾರಂಭಮಾಡಬೇಕು. ಯಾರ್‍ಯಾರು ಎಲ್ಲೆಲ್ಲಿ ನಿಲ್ಲಬೇಕು, ಏನೇನು ಎಚ್ಚರ ವಹಿಸಬೇಕು ಎಂಬ ಎಲ್ಲ ವಿಷಯಗಳನ್ನು ನಿರ್ಧರಿಸಲಾಯಿತು. ಹುಲಿಯನ್ನು ಬಿಟ್ಟು ಬೇರೆ ಯಾವ ಪ್ರಾಣಿ ಕಂಡರೂ ಗುಂಡು ಹೊಡೆಯಕೂಡದೆಂದು ಸೂಚನೆ ನೀಡಲಾಯಿತು.

ಮುಖ್ಯ ಕಡು [ಪ್ರಾಣಿಗಳು ಕಾಡಿನಲ್ಲಿ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ದಾಟಿ ಹೋಗುವ ಆಯಕಟ್ಟಿನ ಸ್ಥಳ]ವಿನಲ್ಲಿ ಪೊನ್ನಪ್ಪನವರೇ ನಿಲ್ಲಬೇಕೆಂದು ಎಲ್ಲರೂ ಸೂಚಿಸಿದರು. ಅದರಂತೆ ಪೊನ್ನಪ್ಪ ಅಲ್ಲಿಗೆ ಹೋದರು. ಹುಲಿ ಯಾವ ಕಡೆಯಿಂದ ಹೇಗೆ ಬಂದರೂ ಸರಿಯಾಗಿ ಕಾಣಿಸುವ ಮರವನ್ನು ಆರಿಸಿ ಮೇಲೇರಿ ಹೋಗಿ ಒಂದು ದೊಡ್ಡ ಕವಲಿನಲ್ಲಿ ಕುಳಿತರು. ಆ ಮರದ ತುಂಬ ಕಾಡು ಬಳ್ಳಿಗಳು ದಟ್ಟವಾಗಿ ಹಬ್ಬಿಕೊಂಡಿದ್ದರಿಂದ ಹುಲಿಗೆ ಇವರು ಸುಲಭದಲ್ಲಿ ಕಾಣಿಸುವಂತಿರಲಿಲ್ಲ. ನೆಲದಲ್ಲಿ ನಿಂತು ಹುಲಿಗೆ ಗುಂಡು ಹೊಡೆಯುವುದು ಪ್ರಾಣಾಪಾಯದ ಕೆಲಸ.

ಸುಮಾರು 2-30ರ ಸಮಯಕ್ಕೆ 40-45 ಜನರ ಗುಂಪು ಮೂರು ಬೇರೆ ಬೇರೆ ಗುಂಪುಗಳಾಗಿ ತಾವೇ ವಿಂಗಡಿಸಿಕೊಂಡು ಬೇಟೆ [ಕೂಡು ಬೇಟೆ] ಸುರು ಮಾಡಿದರು. ಬೊಬ್ಬೆ ಹೊಡೆಯುತ್ತಾ "ಛೂ, ಛೂ, ಹೋ, ಹೋ, ಅದದೊ, ಹೋಯ್, ಹೋಯ್" ಎಂದು ಗುಲ್ಲೆಬ್ಬಿಸಿಕೊಂಡು, ಪೊದೆಗಳಿಗೆ ದೊಣ್ಣೆಗಳಿಂದ ಬಡಿಯುತ್ತಾ ಮುಂದೆ ಮುಂದೆ ಹೋದರು. ನಾಯಿಗಳ ಬೊಗಳುವ ಶಬ್ದದಿಂದ ಕಾಡೆಲ್ಲ ತುಂಬಿ ಹೋಯಿತು. ಹಕ್ಕಿಗಳು ಹೆದರಿ ಕೂಗುತ್ತಾ ದೂರ ಹಾರಿ ಹೋಗುತ್ತಿದ್ದವು. ಸಣ್ಣ ಸಣ್ಣ ಪ್ರಾಣಿಗಳು ಪೊದೆಗಳಿಂದೆದ್ದು ಸಿಕ್ಕಿದ ಕಡೆ ಓಡತೊಡಗಿದವು. ಬೇಟೆಗಾರರ ಬಾಯಿಯಲ್ಲಿ ನೀರೂರಿತು. ಆದರೆ ಸೂಚನೆಯನ್ನು ನೆನಪಿಸಿಕೊಂಡು ಯಾರೂ ಇವುಗಳನ್ನು ಕೊಲ್ಲುವ ಗೋಜಿಗೆ ಹೋಗಲಿಲ್ಲ.

ಸುಮಾರು 35-40 ನಿಮಿಷ ಕಳೆದಿರಬಹುದು ಬೇಟೆಗಾರರ ಗುಂಪುಗಳು ಮುಖ್ಯ ಕಡುವಿನ ಹತ್ತಿರ ಹತ್ತಿರ ಬರುತ್ತಿದ್ದವು. ಅಷ್ಟರಲ್ಲಿ ಪೊನ್ನಪ್ಪನ ಗುಂಡು ಕಾಡನ್ನು ನಡುಗಿಸಿತು. ಜೊತೆಯಲ್ಲೇ ಕೇಳಿದ ಹುಲಿಯ ಆರ್ಭಟ ಎಲ್ಲರ ಎದೆಯನ್ನು ನಡುಗಿಸಿತು. ಒಂದೆರಡು ನಿಮಿಷ ತಡೆದು ಎಲ್ಲರೂ ಆ ಕಡೆಗೆ ಧಾವಿಸಿ ಹೋದರು. ಹುಲಿಯ ಆರ್ಭಟಕ್ಕೆ ನಾಯಿಗಳ ಬಾಯಿ ಮುಚ್ಚಿತ್ತು. ಬಾಲ ಮಡಚಿಕೊಂಡು ತಮ್ಮ ತಮ್ಮ ಯಜಮಾನರ ಹಿಂದೆ ಅವೂ ಓಡಿದವು.

ಜನರೂ, ನಾಯಿಗಳೂ ತಲುಪುವಷ್ಟರಲ್ಲಿ ಪೊನ್ನಪ್ಪನವರು ಮರದಿಂದ ಇಳಿದು ಬಂದಿದ್ದರು. ಗುಂಡು ಬಿದ್ದ ಸ್ಥಳವನ್ನು ಪರೀಕ್ಷಿಸುತ್ತಿದ್ದರು. ಹುಲಿ ಬಿದ್ದಿರಲಿಲ್ಲ. ಕುತೂಹಲಿಗಳ ಎಲ್ಲಾ ಪ್ರಶ್ನೆಗಳಿಗೆ ಪೊನ್ನಪ್ಪನವರ ಉತ್ತರ ಒಂದೆ, "ಸರಿಯಾಗಿಯೇ ಹೊಡೆದಿದ್ದೇನೆ. ಮುಗ್ಗರಿಸಿ ಹಾರಿತು ನೋಡಿ. ಇಲ್ಲೆಲ್ಲೊ ಸತ್ತು ಬಿದ್ದಿರಬೇಕು. ಇಲ್ಲಿ ನೋಡಿ ರಕ್ತ ಹೇಗೆ ಬಿದ್ದಿದೆ. ಅದು

ವೇಗವಾಗಿ ಬಿತ್ತಿತ್ತು. ಆಯಕ್ಕೆ ಗುಂಡು ಬಿದ್ದರೂ ಬಂದ ರಭಸಕ್ಕೆ ಸ್ವಲ್ಪ ದೂರ ಹೋಗಿರಬಹುದು. ಯಾರಾದರೂ ನಾಲ್ಕು ಜನ ನನ್ನೊಂದಿಗೆ ಬನ್ನಿ. ಎಲ್ಲರೂ ಬೇಡ. ಸ್ವಲ್ಪ ಹುಡುಕಾಡುವ.

ಈಗ ಎಲ್ಲರೂ ಉಸಿರು ಬಿಗಿಹಿಡಿದರು. "ಹುಲಿ ಸತ್ತಿದೆಯೋ, ಅರೆಜೀವವಾಗಿದೆಯೋ ಯಾರಿಗೆ ಗೊತ್ತು" ಎಂದು ಕೆಲವರು ಪಿಸುಗುಟ್ಟಿಕೊಂಡು ಹಿಂದೆ ನಿಂತರು. "ಗುಂಡಾದ ಹುಲಿಯನ್ನು ಹೇಗೆ ಹುಡುಕುವುದು ? ಈ ಪೊದೆಗಳ ರಾಶಿಯಲ್ಲಿ ಆರೆಜೀವವಾಗಿ ಅದು ಬಿದ್ದುಕೊಂಡಿದ್ದರೆ ನಮಗೆ ತಿಳಿಯುವುದು ಹೇಗೆ ? ಇದು ಅಪಾಯದ ಕೆಲಸವಪ್ಪ" ಎಂದುಕೊಂಡು ಕೆಲವರು ಹಿಂದೆ ಸರಿದರು. ಹೇಗೊ ಕೊನೆಗೆ 4 ಜನ ಯುವಕರು ಪೊನ್ನಪ್ಪನ ಜೊತೆ ಹೊರಟರು.

ರಕ್ತದ ಕಲೆಗಳ ಜಾಡು ಹಿಡಿದು ಪೊನ್ನಪ್ಪ ಮುಂದೆ ಹೋದರು. 4 ಜನ ಯುವಕರು ಅವರ ಹಿಂದೆ. ಉಳಿದವರು ಬೀಡಿ ಸೇದಿಕೊಂಡು, ಎಲೆ ಅಡಿಕೆ ತಿಂದುಕೊಂಡು, ಅದು ಇದು ಮಾತನಾಡಿಕೊಂಡು, ಫಲಿತಾಂಶಕ್ಕಾಗಿ ಕಾದುಕೊಂಡು ಅಲ್ಲೇ ಕುಳಿತರು. ಹುಲಿಯು ಕಾಲನ್ನೋ, ಕೈಯನ್ನೋ ಎಳೆದುಕೊಂಡು ಹೋದಂತೆ ಕಾಣುತ್ತಿತ್ತು. ತುಂಬ ಎಚ್ಚರಿಕೆಯಿಂದ ನಿಧಾನವಾಗಿ ಹುಡುಕಿಕೊಂಡು ಮುಂದೆ ಹೋಗುತ್ತಿದ್ದರು.

ಸುಮಾರು ಅರ್ಧ ಫರ್ಲಾಂಗ್ ದೂರ ಹೋಗುವಷ್ಟರಲ್ಲಿ ಇವರಿಂದ 7-8 ಅಡಿಗಳ ದೂರದಲ್ಲಿ ಒಂದು ಒಣಮರ ಬಿದ್ದಿತ್ತು. ಆ ಮರದ ಆಚೆ ಬದಿಯಲ್ಲಿ ಏನೋ ಇರುವಂತೆ ಪೊನ್ನಪ್ಪನವರಿಗೆ ಕಂಡಿತು. ಹಿಂದಿನವರಿಗೆ ನಿಲ್ಲುವಂತೆ ಕೈಸನ್ನೆ ಮಾಡಿ ಗಮನಿಸಿ ನೋಡಿದರು. ಹುಲಿ ಮಲಗಿತ್ತು. ಅದರ ತಲೆಯ ಸ್ವಲ್ಪ ಭಾಗ ಮಾತ್ರಕಾಣುತ್ತಿತ್ತು. ಉಳಿದ ಭಾಗವೆಲ್ಲ ಮರದ ಕಾಡಿನಿಂದ ಮರೆಯಾಗಿತ್ತು. ತನ್ನ ಗುಂಡಿಗೆ ಅದು ಸತ್ತಿಲ್ಲವೆಂಬುದು ಅವರಿಗೆ ಖಚಿತವಾಯಿತು. ಈಗ ಒಂದಿಷ್ಟು ಸದ್ದಾದರೂ ಅಪಾಯವೇ. ಹಿಂದೆ ಇರುವವರಿಗೆ ಎಚ್ಚರಿಕೆ ಕೊಡಲು ಅವರು 'ಹುಲಿ, ಹುಲಿ' ಎಂದು ಪಿಸುಗುಟ್ಟಿದರು.

'ಹುಲಿ' ಎಂಬ ಶಬ್ದ ಕಿವಿಗೆ ಬಿದ್ದದೇ ತಡ, ಒಂದೇ ಕ್ಷಣದಲ್ಲಿ ಏನೇನೋ ಆಗಿಹೋಯಿತು. ಹಿಂದೆ ಇದ್ದವರಲ್ಲಿ ಮೂವರು ಹಿಂತಿರುಗಿ ಓಡುವ ತಯಾರಿ ಮಾಡಿದರು. ನಾಲ್ಕನೆಯವನು ವೀರಪ್ಪ. ಅವನಿಗೆ ಹೆದರಿಕೆಯಿಂದ ಏನೇನೋ ಆಗಿಹೋಯಿತು ಓಡಲು ಕಾಲು ಬರಲಿಲ್ಲವೇನೋ ? ಆತ್ಮರಕ್ಷಣೆಗಾಗಿ ಪಕ್ಕದಲ್ಲೇ ತೆಳುವಾಗಿ ಎತ್ತರಕ್ಕೆ ಬೆಳೆದಿದ್ದ ಗಿಡವನ್ನು ಸರಸರನೆ ಹತ್ತಿಬಿಟ್ಟ. ಗಾಬರಿಯಲ್ಲಿ ತುತ್ತತುದಿಗೆ ಏರಿಬಿಟ್ಟ. ಅವನ ಭಾರಕ್ಕೆ ಆ ಗಿಡ ಬಿಲ್ಲಿನ ಹಾಗೆ ಹುಲಿ ಮಲಗಿದ್ದ ಕಡೆಗೇ ಬಾಗಿಬಿಟ್ಟಿತು. ಮತ್ತಷ್ಟು ಗಾಬರಿಯಿಂದ ವೀರಪ್ಪನು ಹಿಡಿತತಪ್ಪಿ ಹುಲಿಯ ಮೇಲೆಯೇ ಬಿದ್ದುಬಿಟ್ಟ. ಏಕಾಏಕಿ ತನ್ನ ಮೇಲೆ ಏನೋ ಆಕ್ರಮಣ ಮಾಡಿದಂತೆ ಆ ಗಾಯಗೊಂಡ ಹುಲಿಗೆ ಅನ್ನಿಸಿರಬೇಕು. ಅದೂ ಗಾಬರಿಯಾಗಿ ತನ್ನ ಮೇಲೆ ಬಿದ್ದ ವಸ್ತುವಿಗೆ ಗಬಕ್ಕನೆ ಬಾಯಿ ಹಾಕಿ ತಲೆಯನ್ನು ಕೊಡವಿತು. ಆ ಕಡೆ ಬೆತ್ತದ ಪೊದೆಯ ಮೇಲೆ ದೊಪ್ಪನೆ ಏನೋ ಬಿದ್ದ ಸದ್ದಿನೊಂದಿಗೆ ವೀರಪ್ಪನ ಆಕ್ರಂದನ ಮುಗಿಲು ಮುಟ್ಟಿತು. ಹುಲಿಯು ಹೆದರಿಕೆಯಿಂದ ಎದ್ದು ಓಡಲು ಪ್ರಯತ್ನಿಸಿತು. ತಡಮಾಡಿದ್ದರೆ ಕೆಲಸ ಕೆಡುತಿತ್ತು. ಆದರೆ ಪೊನ್ನಪ್ಪ ಕ್ಷಣದಲ್ಲಿ ಗುರಿಯಿಟ್ಟು ಗುಂಡು ಹೊಡೆದರು. ದೊಡ್ಡ ಘರ್ಜನೆಯೊಂದಿಗೆ ಹುಲಿ ಆ ಕಡೆಗೆ ಮಗುಚಿ ಅಂಗಾತ ಬಿತ್ತು. ಇನ್ನೊಂದು ಗುಂಡು ಹೊಡೆದರು. ಸ್ವಲ್ಪ ಹೊತ್ತು ನೋವಿನಿಂದ ಹೊರಳಾಡಿ ಅದು ಪ್ರಾಣ ಬಿಟ್ಟಿತು.

ಪೊನ್ನಪ್ಪ ಜೋರಾಗಿ ಕೂಗಿ ಕರೆದು ವೀರಪ್ಪನ ಬಳಿಗೆ ಹೋದರು. ಎಲ್ಲರೂ ಓಡೋಡಿ ಬಂದರು. ವೀರಪ್ಪನು ಬೊಬ್ಬೆ ಹೊಡೆಯುತ್ತಲೇ ಇದ್ದ ಹುಲಿಯ ಕಡಿತದ ರಭಸಕ್ಕೆ ಅವನ ತೊಡೆಯಿಂದ ದೊಡ್ಡ ಮಾಂಸಕಂಡವೇ ಕಿತ್ತುಬಂದು ಜೋತಾಡುತಿತ್ತು. ರಕ್ತ ಕೋಡಿಯಾಗಿ ಹರಿಯುತಿತ್ತು. ಎಲ್ಲರೂ ಸೇರಿ ಅವನನ್ನು ಮೆಲ್ಲನೆ ಪೊದೆಯಿಂದ ಈಚೆ ತಂದರು. ಒಬ್ಬ ತನ್ನ ಅಂಗಿಯನ್ನೇ ಬಿಚ್ಚಿ ಗಾಯಕ್ಕೆ ಪಟ್ಟಿ ಕಟ್ಟಿದ. ಅಷ್ಟಾಗುವಾಗ ವೀರಪ್ಪನಿಗೆ ಪ್ರಜ್ಞೆ ತಪ್ಪಿತು. ತಡಮಾಡಿದರೆ ಅಪಾಯವೆಂದು ಕೆಲವರು ಅವನನ್ನು ಹೊತ್ತುಕೊಂಡು ಊರಿನ ಕಡೆಗೆ ಓಡಿದರು.

ಹುಲಿಯನ್ನು ಒಂದು ಪೊದೆಗಳಿಲ್ಲದ ಖಾಲಿ ಸ್ಥಳಕ್ಕೆ ಎತ್ತಿ ತಂದರು. ಪರಿಶೀಲಿಸಿದಾಗ ಪೊನ್ನಪ್ಪನವರು ಮೊದಲು ಹೊಡೆದ ಗುಂಡು ಬಲಭಾಗದ ರಟ್ಟೆಯ ಭಾಗಕ್ಕೆ ಬಿದ್ದು, ಕೈ ತುಂಡಾಗಿ ಹೋಗಿತ್ತು. ಕುತ್ತಿಗೆಗೂ ಸಾಕಷ್ಟು ಗಾಯವಾಗಿತ್ತು. ಕೈ ತುಂಡಾಗಿ ಜೋತಾಡುತ್ತಿದ್ದುದರಿಂದ ಅದಕ್ಕೆ ತುಂಬ ದೂರ ಓಡಲಾಗಲಿಲ್ಲ. ಕೈಯನ್ನು ಎಳೆಯುತ್ತಾ ಬಂದು ನೋವು ತಾಳಲಾರದೆ ಅಲ್ಲಿ ಮಲಗಿತ್ತು.

ಅಳತೆ ಮಾಡಿದಾಗ ಅದು ಮೂಗಿನ ತುದಿಯಿಂದ ಬಾಲದ ತುದಿಯವರೆಗೆ [ಅಳೆಯುವ ಸಾಮಾನ್ಯ ಕ್ರಮ] 10 ಅಡಿ ಉದ್ದವಿತ್ತು. ಪೂರ್ಣ ಬೆಳೆದ ಗಂಡು ಹುಲಿ ಅದು.

ವೀರಪ್ಪನು 4 ತಿಂಗಳುಗಳನ್ನು ಆಸ್ಪತ್ರೆಯಲ್ಲಿ ಕಳೆಯಬೇಕಾಯಿತು. ಹುಲಿಯ ಬಾಯಿಗೆ ತೊಡೆಯ ಬದಲು ಕುತ್ತಿಗೆ ಸಿಕ್ಕಿದ್ದಿದ್ದರೆ ಅವನೂ ಹುಲಿಯೊಂದಿಗೆ ಹೆಣವಾಗುತ್ತಿದ್ದ. ○

## ಸಂಗಾತಿ ಪ್ರಶ್ನಾವಳಿ 1ಕ್ಕೆ ಸರಿಯಾದ ಉತ್ತರ

1 ಶ್ರೀ ಪಂಡಿತ್ ಜವಾಹರಲಾಲ್ ನೆಹರು
15. 8. 1947 ರಿಂದ 27. 5. 1964
–ಉತ್ತರ ಪ್ರದೇಶ.

2 ಶ್ರೀ ಗುಲ್ಜಾರಿಲಾಲ್ ನಂದಾ
27. 5. 1964 ರಿಂದ 9. 6. 1964–ಮಹಾರಾಷ್ಟ್ರ

3 ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ
9. 6. 1964 ರಿಂದ 11. 1. 1966
–ಉತ್ತರ ಪ್ರದೇಶ.

4 ಗುಲ್ಜಾರಿಲಾಲ್ ನಂದಾ
11. 1. 1966 ರಿಂದ 24. 1. 1966–ಮಹಾರಾಷ್ಟ್ರ

5 ಶ್ರೀಮತಿ ಇಂದಿರಾಗಾಂಧಿ
24. 1. 1966 ರಿಂದ 24. 3. 1977
-ಉತ್ತರ ಪ್ರದೇಶ.

6 ಶ್ರೀ ಮೊರಾರ್ಜಿ ದೇಸಾಯಿ
24. 3. 1977 ರಿಂದ 29. 7. 1979-ಮಹಾರಾಷ್ಟ್ರ

7 ಶ್ರೀ ಚೌಧರಿ ಚರಣ್ ಸಿಂಗ್
29. 7. 1979 ರಿಂದ 14. 1. 1980-ಹರಿಯಾಣ.

8 ಶ್ರೀಮತಿ ಇಂದಿರಾಗಾಂಧಿ
14. 1. 1980 ರಿಂದ 31. 10. 1984
–ಉತ್ತರ ಪ್ರದೇಶ.

9 ಶ್ರೀ ರಾಜೀವ್ ಗಾಂಧಿ
31. 10. 1984 ರಿಂದ 1. 12. 1989
–ಉತ್ತರ ಪ್ರದೇಶ.

10 ಶ್ರೀ ವಿ. ಪಿ. ಸಿಂಗ್
2. 12 1989 ರಿಂದ 9. 11. 1990
–ಉತ್ತರ ಪ್ರದೇಶ.

11 ಶ್ರೀ ಚಂದ್ರಶೇಖರ್
11. 11. 1990 ರಿಂದ 21. 6. 1991
–ಉತ್ತರ ಪ್ರದೇಶ.

12 ಶ್ರೀ ಪಿ. ವಿ. ನರಸಿಂಹರಾವ್
22. 6. 1991 ರಿಂದ 31. 12. 1995
–ಆಂಧ್ರ ಪ್ರದೇಶ.

13 ಶ್ರೀ ಅಟಲ್ ಬಿಹಾರಿ ವಾಜಪೇಯಿ
13 ದಿವಸ–ಬಿಹಾರ್.

14 ಶ್ರೀ ಹೆಚ್. ಡಿ. ದೇವೇಗೌಡ
1. 6. 1996 ರಿಂದ 21. 4. 1997–ಕರ್ನಾಟಕ.

15 ಶ್ರೀ ಐ. ಕೆ. ಗುಜ್ರಾಲ್
21. 4. 1997 ರಿಂದ 17. 3. 1998–ದೆಹಲಿ.

16 ಶ್ರೀ ಅಟಲ್ ಬಿಹಾರಿ ವಾಜಪೇಯಿ–ಬಿಹಾರ್.

## ಸಂಗಾತಿ ಪ್ರಶ್ನಾವಳಿ 2ಕ್ಕೆ ಪ್ರಶ್ನೆಗಳು

1 ಯಾವುದಕ್ಕೆ "ಶಕ್ತಿ ಸ್ಥಳ"ವೆಂದು ಹೆಸರು ಇಡಲಾಗಿದೆ.

2 ಅಂತರರಾಷ್ಟ್ರೀಯ ನ್ಯಾಯಾಲಯ ಯಾವ ದೇಶದಲ್ಲಿದೆ ?

3 ಮಹಾತ್ಮಾಗಾಂಧಿಯವರು ಮೊದಲ ಬಾರಿ ಸತ್ಯಾಗ್ರಹವನ್ನು ಆರಂಭಿಸಿದುದು ಎಲ್ಲಿ ?

4 ಹಡಗು ಕಟ್ಟುವುದಕ್ಕೆ ಹೆಸರುವಾಸಿಯಾದ ನಗರ ಯಾವುದು ?

5 ಜಿಲ್ಲಾ ನ್ಯಾಯಾಧೀಶರ ನೇಮಕ ಬಡ್ತಿ ಮಾಡುವ ಅಧಿಕಾರ ಯಾರಿಗೆ ಇರುತ್ತದೆ.

---

ವಿ. ಸೂ. : 1. ಕೊಡಗು ಸಂಗಾತಿ ಪ್ರಶ್ನಾವಳಿಯಲ್ಲಿ ಪ್ರಕಟಗೊಂಡ ಪ್ರಶ್ನೆಗಳಿಗೆ ಯಾರೂ ಕೂಡ ಸಮಂಜಸವಾದ ಉತ್ತರವನ್ನು ಕಳುಹಿಸಲಿಲ್ಲ.

2. ಪ್ರಶ್ನಾವಳಿಯಲ್ಲಿ ಪ್ರಕಟಗೊಂಡ ಪ್ರಶ್ನೆಗಳಿಗೆ 15 ದಿವಸದೊಳಗೆ ಸರಿಯಾದ ಉತ್ತರವನ್ನು ಸಂಗಾತಿಗೆ ಬರೆದು ಕಳುಹಿಸಬೇಕು

---

### ಬಯಕೆ

ಗಾಂಧೀಜಿ ಬಯಸುವುದು ಮಕ್ಕಳನ್ನು
ನೆಹರು ಬಯಸುವುದು ಗುಲಾಬಿ ಹೂವನ್ನು
ನಾನು ಬಯಸುವುದು "ಕೊಡಗು ಸಂಗಾತಿ"ಯನ್ನು.

**ಕುಂದ್ರುಕೋಡಿ ಭಾರತಿ ಸೋಮಣ್ಣ,**
ಮಡಿಕೇರಿ.

# ನಿಮ್ಮ ಪತ್ರಗಳು

## ಅಭಿನಂದನೆಗಳು

ಮಾನ್ಯರೇ,

'ಕೊಡಗು ಸಂಗಾತಿ' ಪತ್ರಿಕೆಯನ್ನು ನಮ್ಮ ಗೌಡ ಜನಾಂಗಕ್ಕೆ ಅರ್ಪಿಸಿ, ತಮ್ಮ ಕೈಲಾದ ಸೇವೆಯನ್ನು ಮಾಡುತ್ತಲಿದ್ದಿರಿ. ಒಬ್ಬ ಸ್ತ್ರೀಯಾಗಿ ಮೆಚ್ಚತಕ್ಕದ್ದೆ. ನಮಗೆ ನಿಮ್ಮ ಮೇಲೆ ಎಲ್ಲಿಲ್ಲದ ಗೌರವ. ಹಾಗೆಯೇ ಅರೆಭಾಷೆಯ ವಿಭಾಗದಲ್ಲಿ ಧಾರವಾಹಿಯಾಗಿ ಬರುತ್ತಿರುವ 'ಕರಿಚಿನ್ನ'ವು ತುಂಬ ಸೊಗಸಾಗಿ ಮೂಡಿಬರುತ್ತಿದೆ. ಒಬ್ಬ ಮುಸ್ಲಿಂ ಬಾಂಧವರಾಗಿ ಗೌಡ ಬಾಂಧವರಿಗಿಂತ ಚೆನ್ನಾಗಿ ಅರ್ಥೈಸಿಕೊಂಡ ಫಿರ್ದೌಸ್ ಪತ್ರಿಕೆಯ ಸಂಪಾದಕರಾದ ಮುಹಮ್ಮದ್‌ರವರಿಗೆ ನಮ್ಮೆಲ್ಲರ ಅಭಿನಂದನೆಗಳು. ಪತ್ರಿಕೆಯನ್ನು ಎಷ್ಟೇ ಕಷ್ಟ ಬಂದರೂ ನಿಲ್ಲಿಸದೆ ನಿರಂತರವಾಗಿ ಮೂಡಿಬರಲಿ.

ಎ. ಚಂದ್ರಮೋಹನ್, C/o 56 A.P.O.

## ನಾಡು-ನುಡಿ, ಉಡುಗೆ-ತೊಡುಗೆ ಇದು ಔಚಿತ್ಯವೆ

ಮಾನ್ಯರೇ,

'ಕೊಡಗು ಸಂಗಾತಿ' ವೃದ್ಧಿಯಾಗುತ್ತಿರುವುದು ಒಳ್ಳೆಯ ಶುಭ ಸೂಚನೆ. ತಮ್ಮ ಬರಹಗಳು ಮಧುರವಾಗಿವೆ. ಆದರೂ ಸಮಾಜ ಎಷ್ಟರಮಟ್ಟಿಗೆ ಸುಧಾರಣೆ ಆಗುತ್ತದೋ ಹೇಳಲಾಗದು. ಇಂದಲ್ಲ ನಾಳೆಯಾದರೂ ಸಮಾಜ ಸುಧಾರಣೆ ಕಾಣಬೇಕು.

ದೇಶ, ಭಾಷೆ, ಉಡುಪು ಇವು ಯಾವುದೇ ಜನಾಂಗಕ್ಕಾದರೂ ಬಹು ಮುಖ್ಯ. ದೇಶ ಎಂದರೆ ವಾಸವಿರುವ ಸ್ಥಳ, ಭಾಷೆಯೆಂದರೆ ಮಾತೃ ಭಾಷೆ, ಉಡುಪು ಎಂದರೆ ಮಾತೃಭಾಷೆ ಆಡುವವರು ಧರಿಸುವ ಅಂಗಿ, ಸೀರೆ ಇತ್ಯಾದಿ. ನಮಗೆ ದೇಶ ಕೊಡಗು. ಅದು ತಾಲ್ಲೂಕೇ ಆಗಲಿ, ಜಿಲ್ಲೆಯೇ ಆಗಲಿ, ಅದು ನಮಗೆ ದೇಶ. ಅಲ್ಲಿ ವಾಸಿಸುವವರೆಲ್ಲರೂ ಆ ದೇಶವಾಸಿಗಳು. ಜಾತಿ, ಮತಗಳ ದ್ವೇಷ ಸಲ್ಲದು. ದೇಶ ಎಂದರೆ ನಾವು ಅಲ್ಲಿ ಹುಟ್ಟಬೇಕು, ಜೀವಿಸಬೇಕು, ಸಾಯಬೇಕು. ಇದೇ ನಮ್ಮ ದೇಶ, ನಮ್ಮ ಮಣ್ಣು, ನಮ್ಮ ಮಾತೃಭೂಮಿ.

**ಭಾಷೆ :** ಜನಾಂಗದವರ ಆಡುಭಾಷೆ ಗೌಡ ಭಾಷೆ ಕೊಡವ ಭಾಷೆ, ಕೊಂಕಣಿ, ತುಳು, ತೆಲುಗು, ಮರಾಠಿ, ಬೆಂಗಾಲಿ ಮುಂತಾದ್ದು. ಭಾಷೆ ಎಂದೂ ಒಂದು ಜನಾಂಗದ ಸೊತ್ತಲ್ಲ. ಅದು ಸರ್ವವ್ಯಾಪಿ. ಉದಾ : ಇಂಗ್ಲಿಷ್ ಮೂಲತಃ ಇಂಗ್ಲೆಂಡ್ ದೇಶದ ಭಾಷೆ. ಅದನ್ನು ಆ ದೇಶದವರು ಪ್ರೀತಿಸಿದರು, ಆಡಿದರು, ಹೊರದೇಶದವರಿಂದ ಆಡಿಸಿದರು. ಇಂದು ಇಂಗ್ಲಿಷ್ ಭಾಷೆ ಮಿಕ್ಕೆಲ್ಲಾ ಭಾಷೆಯನ್ನು ಮೀರಿ ನಿಂತಿದೆ ಏಕೆ? ಅಲ್ಲಿಯ ಜನರ ಮಾತೃಭಾಷೆಯ ವ್ಯಾಮೋಹ ಹಾಗೆಯೇ. ಕೊಡಗಿನಲ್ಲಿ ಕೊಡವ ಭಾಷೆ, ಗೌಡ ಭಾಷೆ, ಗಿರಿಜನರ ಹಾಡಿ ಭಾಷೆ ಪ್ರಾಮುಖ್ಯ. ಜನಾಂಗದವರು ಜನಾಂಗ ಭಾಷೆಯನ್ನು ಪ್ರೀತಿಸಬೇಕು, ಆಡಬೇಕು, ಆಡಿಸಬೇಕು. ಹಾಗಾದರೆ ಮಾತ್ರ ನಮ್ಮನ್ನು ನಾವು ಗುರ್ತಿಸಿಕೊಳ್ಳುವೆವು. ಪರಭಾಷೆ ಕಲಿಯಬೇಕು. ಆದರೆ ಮಾತೃ ಭಾಷೆಯನ್ನು ತುಳಿದು ಅದರ ಮೇಲೆ ಪರಭಾಷೆಯ ಸೌಧ ಕಟ್ಟಬಾರದು.

**ವೇಷ (ಉಡುಪು) :** ಭಾಷೆಯಷ್ಟೇ ನಮ್ಮ ಉಡುಪು ಮುಖ್ಯ. ನಮ್ಮ ಭಾಷೆ, ನಮ್ಮ ಉಡುಪು ನಮ್ಮಲ್ಲಿದ್ದರೆ ನಮ್ಮ ದೇಶ ತಾನಾಗಿಯೇ ಗುರ್ತಿಸಲ್ಪಡುತ್ತದೆ. ಫ್ಯಾಷನ್ ಬರುತ್ತವೆ ಹೋಗುತ್ತವೆ. ನಮ್ಮ ಮಾತೃ ಭಾಷೆ, ಮಾತೃ ಉಡುಪು ಸದಾ ನೆಲೆ ನಿಂತಿರುತ್ತದೆ. ಎಲ್ಲಿ ಯಾರು ಏನಾದರೊಂದು ಉಡುಪು ಧರಿಸಿಕೊಂಡು ತಮ್ಮ ಚರ್ಮವನ್ನು ಮುಚ್ಚಬಹುದು ಅಥವಾ ಅದನ್ನು ತೋರಿಸಿಕೊಳ್ಳಬಹುದು. ಆದರೆ ನಮ್ಮನ್ನು ಸಮಾಜದಲ್ಲಿ, ಸಮಾಜದ ಕಾರ್ಯದಲ್ಲಿ ನಾವು ನಮ್ಮ ತನವನ್ನು ಬಿಟ್ಟು ಅನ್ಯರನ್ನು ಅನುಕರಣಿಸಿದರೆ ನಮಗೆ ಅನಾಹುತ ಕಾದಿರಿಸಿದ್ದು. ಆದ್ದರಿಂದ ನಮ್ಮ ಮಣ್ಣು [ದೇಶ], ನಮ್ಮ ಭಾಷೆ, ನಮ್ಮ ಉಡುಪು ಸದಾ ನಮ್ಮ ಹಿಡಿತದಲ್ಲಿರಬೇಕು.

ನಾವು ನಮ್ಮ ಸಮಾಜದ ಕಾರ್ಯ ಎಂದರೆ, ಮಗುವಿಗೆ ಹೆಸರಿಡುವುದು, ಮದುವೆ ಸಮಾರಂಭ, ಸಮಾಜದ ಹಬ್ಬ ಹುಣ್ಣಿಮೆ, ಸಾವು ಇಂತಹ ಸಮಾಜ ಕಾರ್ಯದಲ್ಲಿ ನಾವು ನಮ್ಮ ಸಮಾಜದ ಭಾಷೆ. ಉಡುಪನ್ನು ಕಡ್ಡಾಯವಾಗಿ ಉಟ್ಟಿರಲೇ ಬೇಕು. ನಮ್ಮ ಭಾಷೆ, ನಮ್ಮ ಉಡುಪನ್ನು ನಾವು ಆಡದೆ, ಧರಿಸದೆ ಇನ್ನ್ಯಾರು ಧರಿಸಬೇಕು ?

ಇದನ್ನು ಪ್ರತಿಯೊಬ್ಬ ಯುವಕ, ಯುವತಿ ಗಮನಿಸಬೇಕು, ಅದರಂತೆ ಆಚರಿಸಬೇಕು. ಹಿರಿಯರು ಕಡ್ಡಾಯವಾಗಿ ಇದನ್ನು ಆಚರಿಸಲು ಪ್ರೇರೇಪಿಸಬೇಕು. ಅಂದರೆ ಅದೇ ನಮಗೆ ಕಲ್ಯಾಣ.

ನಾವು ಬಾಳಬೇಕು, ಇನ್ನೊಬ್ಬರನ್ನು ಬದುಕಿಸಬೇಕು. ಕಿಚ್ಚು ಹಚ್ಚುವುದು ಸುಲಭ, ಹತ್ತಿ ಉರಿದರೆ ಸರ್ವನಾಶ.

"ಕಾವೇರಮ್ಮ ಎಲ್ಲರನ್ನೂ ಕಾಪಾಡಲಿ."

ಚೇಂದ್ರಿಮಾಡ ಜಿ. ಮುತ್ತಪ್ಪ,
ಕುಶಾಲನಗರ.

## ಅರೆ ಭಾಷಿಕ ವಿಭಾಗ

# ಅಲಂಬೆಲ್ ರಾಜನ ಕಥೆ

ಗೋವಿಂದಮ್ಮನ ಅ. ಪ್ರವೀಣಕುಮಾರ

ನೀವ್‌ಗೆಲ್ಲ ಆ ಜೋಡ್ ಸೇತುವೆ ರಾಜನ ಗೊತ್ತಿರ್ದು. ಕಳ್ದ ಬೇಸಿಗೆಲಿ ಅಂವ ಗೂಡೆ ಹುಡ್ಕಿಕಂಡ್ ನಿಮ್ಮ ಊರಿಗೂ ಬಂದಿರ್ದು. ತಂಗೆನ ಮದ್ವೆ ಆದ ಮೇಲೆ, ಕಾಯ್ಲೆಲಿ ಇರೋ ಅವ್ವನ ನೋಡಿಕಂಡ್ ಇರೊ ಗೂಡೆನ ಅಂವ ಈಗಲೂ ಹುಡ್ಕ ತಾವುಟ್ಟು. ಆಟ ತಿಂಗಕ್ಕ ಹದಿನೈವ್ ದಿನದ ಹಿಂದೆ ಆದ ಕಥೆನ ಕೇಳಿ.

ಅಂದ್ ಶುಕ್ರವಾರ, ರಾಜ ಮಡಿಕೇರಿಗೆ ಸಂತೆಗೆ ಹೋಗಿರ್ ಕಾಕನ ಅಲ್ಲಿ ಅವಂಗೆ ಪಾಪಣಿ ಬಾವ ಸಿಕ್ಕಿದ್ದೊಗಡ. ಅವ ರೊಟ್ಟಿಗೆ ಇಂವ ಯಾವ್ದಾರ್ ಗೂಡೆ ಇದ್ರೆ ಹೇಳಿ ತ ಹೇಳ್ತ್ ಗಡ. ತಕ್ಷಣ ಅವು ಕನ್ನಡ ಜಿಲ್ಲೆ ಗೂಡೆ ಆದ್ರೆ ಆದೆನಾ ತ ಕೇಳ್ಯಳೊ. ರಾಜಂಗೆ ಅರ್ಜೆಂಟ್ ಅಲಾ, 'ಹೂಂ' ತ ಹೇಳಿ ಬಿಟ್ಟುಟು. ಅಷ್ಟೊತ್ತಿಗೆ ಪಾಪಣಿ ಬಾವ ಅವರ ಜೊತೆಲಿ ಪಂಚೆ ಕಟ್ಟಿಕಂಡ್ ಎತ್ತರಾಗಿದ್ದ ಜನನ ಪರಿಚಯ ಮಾಡಿ "ಇವರ ತಂಗಿ ಉಟ್ಟು, ನೋಡು" ತ ಹೇಳಿ ಒಂದ್ ಫೋಟೋ ತೋರ್ಸಿದೊ ಗಡ. ರಾಜಂಗೆ ಫೋಟೋ ನೋಡ್ದಂಗೆ ಇಷ್ಟ ಆಗೊತು. ಅಷ್ಟೊತ್ತಿಗೆ ಜೊತೆಲ್ಲಿದ್ದ ಜನ 'ನೋಡಿ ಭಾವ, ನನ್ನ ತಂಗೆನ ಕೈಲಿ ನಾನೊಂದು ಕೆಲ್ಸ ಮಾಡ್ಸದೆ ಬೆಳ್ಸೊಳೆ. ನೀವ್ಗೆ ಖುಷಿ ಆದ್ರೆ ಬೇಗ ಮದ್ವೆ ಮಾಡ್ನೊ ತ ಹೇಳ್ತ್ ಗಡ. 'ಭಾವ'ತ ಹೇಳ್ದಂಗೆ ರಾಜಂಗೆ ತುಂಬಾ ಖುಷಿ ಆವ್ಟು, ಆಯ್ತ್‌ವಾರನೇ ಮನೆ ನೋಡಿಕೆ ಬನ್ನಿ ತ ಹೇಳಿ, ಗೂಡೆನ ಫೋಟೊ.ನ ತಕಂಡ್ ಮನೆಗೆ ಹೊರ್ಟತ್.

ಬಸ್ ಇಳ್ದಂಗೆ ಕೈಲಿ ಫೋಟೊ ಹಿಡ್ಕಂಡ್ ಸಿಳ್ಳೆ ಹಾಕಿಕಂಡ್ ನಮ್ಮ ಕೋಳಿ ಅಂಗ್ಡಿ ಕಡೆ ಬಾತ್. ಬಂದಂಗೆ ನಂಗೆ ಫೋಟೊನ ತೋರ್ಸಿತ್, ಗೂಡೆ ನೋಡಿಕೆ ಆಚೆ ಮನೆ ಚಿಮ್ಮಿನಂಗೆ ಪೊರ್ಲಾಗಿತ್. ಅದ್ಕೆ ರಾಜ ಫೋಟೊನ ನೋಡ್ದಂಗೆ ಒಪ್ಪಿಕಂಡ್ ಬಂದುಟು. ಆಟೆಗೆ ಮುಂದೆ ಮದ್ವೆ ಮಾಡಕು ತ ಗ್ಯಾನ ಮಾಡಿ ಗೂಡೆನ ಕಡೆಯವ್ಕೆ ಮನೆ ನೋಡಿಕೆ ಬನ್ನಿ ತ ಹೇಳ್ಯೊಳೆ ತ ಹೇಳ್ತ್. 'ಅರ್ಜೆಂಟ್ ಮಾಡ್ಬಡ್ರ, ಡಿಸಂಬರ್‌ಲಿ ಮಾಡ್'ತ ಹೇಳ್ರೆ 'ಬೇಗ ಆದ್ರೆ ಅಗೆಕೆಲ್ಸಕ್ಕೆ ಒಂದು ಜನ ಆದೆ' ತ ಹೇಳ್ತ್. ಗೂಡೆನ ನೋಡಿಕೆ ಯಾಗ ಹೋದು ತ ಕೇಳ್ರೆ ವಿಳ್ಯಶಾಸ್ತ್ರಕ್ಕೆ ಹೋಕಾಕನ ನೋಡ್ರೆ ಸಾಕ್ ತ ಹೇಳ್ದೆ. ನಾಡ್ ಕೆಲ್ಸ ಬಂದದೆ ತ ಕೇಳ್ರೆ ಕನ್ನಡ ಜಿಲ್ಲೆ ಗೂಡೆಗ ನಮ್ಮ ಕೊಡಗಿನ ಗೂಡೆಗಳಿಗಿಂತ ಲಾಯ್ಕ ಕೆಲ್ಸ ಮಾಡುವೆ ತ ಹೇಳ್ತ್. ಬೆಂಗ್ಳೂರ್‌ಲಿ ಇರೊ ಅಕ್ಕಂಗೆ ಬಾವಂಗೆ ತಿಳ್ಸ ತ ಹೇಳ್ರೆ ಮದ್ವೆ ಆಗಂವ ನಾನ್, ನಂಗೆ ಇಷ್ಟ ಆದ್ರೆ ನಾ ಮಾಡಿಕಣೆ ತ ಹೇಳ್ದೆ. ಒಟ್ರಾಸಿ ಅವಂಗೆ ಗೂಡೆನ ಇಷ್ಟ ಆಗುಟು. ಅಲ್ಲಿಂದ ಮನೆಗೆ ಹೋಕಾಕನ ಐತ್ವಾರ ಎರಡ್ ಕೋಳಿ ತಕಂಡ್ ಮನೆಗೆ ಬಾ ತ ಹೇಳಿ 100 ರೂಪಾಯಿ ಅಡ್ವಾನ್ಸ್ ಕೊಟ್ಟ್ ಹೋತು.

ಐತ್ವಾರ ರಾಜನ ಮನೆಗೆ ಸುಮಾರ್ 10 ಗಂಟೆಗೆ ಹೋದೆ. ಅಲ್ಲಿ ಸಂಭ್ರಮನೇ ಸಂಭ್ರಮ. ರಜೆಲಿ ಬಂದ ಅಕ್ಕನ ಮಕ್ಕಳ ಕೈಲಿ ಅದ್ ಮಾಡ್, ಇದ್ ಮಾಡ್ ತ ಹೇಳಿಕಂಡ್ ರಾಜ ಅತ್ತಂದಿತ್ತ ಒಡಾಡ್ತಾವುಟ್ಟು. ನಾನ್ ಅಲ್ಲಿಗೆ ಹೋದಂಗೆ ಟೆಂಪೊ ಸದ್ದ್ ಕೇಳ್ತ್. ಟೆಂಪೊ ಬಂದ್ ಅಂಗಳಲಿ ನಿತ್ತತ್. ಟೆಂಪೊಂದ ಜನ ಇಳಿಯಕೆ ಸುರು ಮಾಡ್ದೊ, ಎಷ್ಟ್ ಜನ ಇಳ್ದರೂ ಟೆಂಪೊ ಖಾಲಿ ಆಗ್ತನೇ ಇಲ್ಲೆ. ಲಾಸ್ಟ್‌ಗೆ ಲೆಕ್ಕ ಮಾಡ್ರೆ 32 ಜನ ಇದ್ದೊ. ತಕ್ಷಣ ರಾಜ ನನ್ನ ಹತ್ರ ಬಂದ್ ಇನ್ನೊಂದೆರಡ್ ಕೋಳಿ ತಕಂಡ್ ಬಾಕೆ ಹೇಳ್ತ್. ನಂಗೆ ಪುನಃ ಹೋಕೆ ಬೇಜಾರ್, ಮೆಲ್ಲೆ ರಾಜನ ಅಕ್ಕನ ಮಜನ ಕರ್ದ್ ಮಿಠಾಯಿಗೆ ದುಡ್ದ್ ಕೊಟ್ಟ್ ಅಂವನ ಕೋಳಿ ತಾಕೆ ಕಳ್ಸದೆ. ನೆಂಟ್ರ ಕಾಲ್ ತೊಳಿಯಕೆ ಅಂಗಳಲಿ ಇದ್ದ ಎರಡ್ ಮಂಡೆ ನೀರ್ ಖಾಲಿ ಆತ್. ಮತ್ತೆ ನೆಂಟ್ರ ಕೈ ಕಾಲ್ ಎಲ್ಲಾ ಹಿಡ್ದ್ ಅದ್ ಇದ್ ತ ಮಾತಾಡಿಕೆ ಕುದ್ದೊ. ಅಷ್ಟೊತ್ತಿಗೆ ಅಲ್ಲೆ ಕುದ್ದಿದ್ದ ಒಂದ್ ಜನ ನನ್ನ ಪರಿಚಯ ಮಾಡಿಕಂಡ್ ನೀವ್ಗೆ ಮದ್ವೆ ಆವ್ಟಾ, ಆಗ್ದಿದ್ರೆ ಹೇಳಿ, ನನ್ನ ಮಗಳ ಕೊಟ್ನೆ ತ ಹೇಳ್ತ್. ಆಗ ನಾನ್ ಮಾತ್ ತಿರ್ಗಿಸಿಕೆ ವಿಳ್ಯಶಾಸ್ತ್ರನ ಯಾಗ ಇಟ್ ಕಣ್ನೊ ತ ಹೇಳಿ ಮಾತ್ ತಿರ್‌ಗಿಸಿರೆ, ಆ ಜನಕ್ಕೆ ಸಮಾಧಾನನೆ ಆಗೊಂಗಿಲ್ಲೆ. ಮತ್ತೆ ಮತ್ತೆ ಅದನ್ನೆ ಕೇಳ್ತಾವುಟ್ಟು. ಅಷ್ಟೊತ್ತಿಗೆ ರಾಜನ ಅಕ್ಕನ ಮಜ ಕೋಳಿ ತಕಂಡ್ ಬಾತ್. ನಾನ್ ಅದರ ಅಚ್‌ಕಟ್ಟ್ ಮಾಡಕು ತ ಹೇಳಿ ಅಲ್ಲಿಂದ ಮೆಲ್ಲೆ ಜಾರಿಕಂಡೆ. ಅತ್ತೆ [ರಾಜನ ಅವ್ವ] ನನ್ನ ಪಾಡ್ ನೋಡಿಕಂಡ್ ನಗ್ತಿದ್ದೊ.

ರಾಜನ ಅವ್ವಂಗೆ ಮಜ ಗೂಡೆನ ನೋಡದೆ ಒಪ್ಪಿಕಂಡ ದಕ್ಕೆ ಸ್ವಲ್ಪ ಸಿಟ್ಟ್. ಆದ್ರೆ ಅಂವ ಖುಷಿ ಇರ್ದಾರ್‌ಂದ ಸ್ವಲ್ಪ ನೆಮ್ಮದಿ. ಅಂತು ಅಷ್ಟ್ ಇಷ್ಟ ಇಲ್ಲೆ. ಒಳಗೆ ಕೋಳಿ ಅಚ್ ಕಟ್ಟ್ ಮಾಡಿ, ಸಾರ್ ಮಾಡಿ ಆಕಾಕನ 1 ಗಂಟೆ ಆಗಿತ್, ಮತ್ತೆ ನೆಂಟ್ರ್ ಊಟ ಮಾಡಿ ಹೊರ್ಡ್‌ಕಾಕನ 3 ಗಂಟೆ

ಆಗಿತ್ತ್. ಆಗ ನೆಂಟ್ರ ಅಜ್ಜಿಯೊಂದು ರಾಜನ ಅಕ್ಕನ ಮಕ್ಕಳ ಹತ್ರ ಅರೆ ಭಾಷೆ, ತುಳು ಮಿಶ್ರ ಮಾಡಿಕಂಡ್ ಮಕ್ಕಲೆ ಮಜಮೆಗೆ ಬಾಕಾಕನ ಎಂಕಳಲ್ಲಿಗೆ ಬರೋಡು, ಆತಾ ಮಕ್ಕಳೆ ತ ಹೇಳ್ತ್. ಆ ಮಕ್ಕಳಿಗೆ ಸರಿಯಾಗಿ ಅರೆಬಾಸೆನೇ ಬಾಲೆ. ಕಣ್ಣ್ ಪಿಳಿ ಪಿಳಿ ತ ಬಿಟ್ಟ್‌ಕಂಡ್ ಅಜ್ಜಿನ ನೋಡ್ತಾವೊಳೊ. ನಮಿಗೆ ಅವೆ ದ್ರ ನೆಗಾಡ್ದಂಗಲ್ಲ, ಬಿಟ್ಟಂಗಲ್ಲ. ಹೋಡ್ ಕಾಕನ ವಿಶ್ವಶಾಸ್ತ್ರ ಎಲ್ಲ ಎಂತಕ್ಕೆ ಒಂದೇ ಸಲ ಮದ್ವೆ ಮಾಡಿಕಣ್ನೊ. ಬುಧುವಾರ ರೂಬು ರೂಬು ಮಾತಾಡ್ನೊ ತ ಹೇಳಿ ಅಲ್ಲಿಂದ ಹೊರ್ಟ್ನೊ. ನಂಗ ಗೂಡೆ ಕೊಟ್ನಿ ತ ಹೇಳ್ದ ಜನ ಅಂತು ಟೆಂಪೊ ಹೊರ್‍ಡಿಕೆ ಮುಟ್ಟೆ ನನ್ನ ಹಿಂದೆ ಮುಂದೆ ಓಡಾಡ್ತ ಇತ್ತ್.

ಗೂಡೆನ ಕಡೆಯವು ಅತ್ತ ಹೋದಂಗೆ ಇತ್ತ ರಾಜ ಬೆಂಗ್ಳೂರ್‌ಲಿ ಇರೋ ಅಕ್ಕಂಗೆ, ಮಿಲ್ಟ್ರಿಲಿ ಇರೋ ತಮ್ಮಂಗೆ ಕಾಗದ ಬರ್ದ್ ಹಾಕಿತ್. ಗೂಡೆನ ಗ್ಯಾನಲಿ ಅಂದ್ ರಾತ್ರಿ ಇಡೀ ನಿದ್ರೆ ಮಾಡ್‌ತ್ಲೆ. ಮಾರ್ನೆ ದಿನ ಬೊಳಿ ಬುಡ್ಕೆ ಮುಂದೆ ನಮ್ಮ ಜಿಮ್ಮಿ ನಾಯಿ ಬೊಗುಳ್ದು ಕೇಳ್ತ್. ಬಯ್ಯಂಡ್ ಎದ್ದೆ. ಎದ್ದ್ ಹೊರಗೆ ಬಂದ್ ನೋಡ್ರೆ ರಾಜ ಅಷ್ಟೊತ್ತಿಗೆ ಟ್ರಿಮ್ಮಾಗಿ ಡ್ರೆಸ್ ಮಾಡಿಕಂಡ್ ಉಬ್ಬುಲು ದಾಟ್ತಾವುಟ್ಟು. ಇದ್ದ ಬಟ್ಟೆಲೆ ಮಡಿಕೇರಿ, ನೆಂಟ್ರಮನೆ ಎಲ್ಲಾ ಸುತ್ತ್‌ತಿದ್ದ ರಾಜ ಇಂದ್ ಡ್ರೆಸ್ ಮಾಡ್ದರ ನೋಡಿ ಇದ್ ಕನ್ಸಲ್ಲ ತ ತಿಳ್‌ಕಣಿಕೆ ಜಿಂಟಿಕಂಡ್ ನೋಡ್ದೆ. ಕನ್ಸಲ್ಲ ತ ಗ್ಯಾರಂಟಿ ಆತ್. ಅಂತು ಸುಧಾರ್ಸಿಕಂಡ್ ಕೇಳ್ದೆ, ಎಂತರ ಬೆಳಿಗ್ಗೆ ದೂರ ಹೊರಟುಂಗುಟ್ಟ. ಆಗ ರಾಜ ರಾತ್ರಿ ಇಡೀ ನಿದ್ರೆ ಇಲ್ಲೆ ತಾ, ಈಗ ನಿನ್ನ ಕರ್ಕಂಡ್ ಗೂಡೆನ ಮನೆಗೆ ಪೋಯಿತ ಬಂದೆ ತ ಹೇಳ್ತ್. ನಂಗೆ ಕೋಳಿ ಅಂಗಡಿ ಮುಚ್ಚಿರೆ ಲಾಸ್ ಆದೆ, ಅತ್ತ ಚೆಡ್ಡಿ ದೋಸ್ತಿ ರಾಜನ ಬುಟ್ಟಂಗಲ್ಲ. ಎಂತ ಮಾಡ್ದು ತ ಗ್ಯಾನ ಮಾಡ್ದೆ. ರಾಜ ಎಂತ ಮಾಡ್ರು ನನ್ನ ಬುಡೊಂಗಿಲ್ಲೆ. ಅಂತು ಇಂದ್ ವ್ಯಾಪಾರಕ್ಕೆ ಕಲ್ಲ್ ಬೀತ್ ತ ಹೇಳಿ ಅಂವನೊಟ್ಟಿಗೆ ಗೂಡೆನ ಮನೆಗೆ ಹೊರ್ಟೆ.

ಬೆಳ್ಗನೇ ಮನೆ ಬುಟ್ಟ್ ಹೊರಟ ನಾವ್ಗೆ ಗೂಡೆನ ಊರ್ ತಲ್ಪಿಕಾಕನ 12 ಗಂಟೆ ಆಗಿತ್ತ್. ಮತ್ತೆ ಅಲ್ಲಿ ಒಂದು ಭಟ್ರ ಹೋಟ್ಲ್‌ಲಿ ಊಟ ಮಾಡಿ ಗೂಡೆನ ಮನೆಗೆ ಹೊರ್ಟ್ನೊ. ಅಲ್ಲಿ ಯಾರ್‍ಯಾರ್ನೊ ವಿಚಾರಿಸಿ ಆಕಾಕನ ನಾಕ್ ಮೈಲ್ ನಡೆ ಯಂಕು ತ ಹೇಳ್ದೊ. ನಂಗೆ ಅದ್ ಕೇಳಿ ಜ್ವರನೇ ಬಂದಂಗಾತ್. ಎಂತ ಮಾಡ್ದು, ನೀರ್‌ಗಿಲ್ದ ಮೇಲೆ ಚಳಿ ತೇಳ್ರೆ ಆದೆನಾ ತ ಹೇಳಿ ಹೊರ್ಟೆ. ಅಷ್ಟೊತ್ತಿಗೆ ರಾಜ ತಿಂಡಿ, ಅದ್, ಇದ್ ತ ಹೇಳಿ ಒಂದೈದ್ ಕೇಜಿ ಲಗ್ಗೇಜ್ ಬ್ಯಾರೆ ಪ್ಯಾಕ್ ಮಾಡ್ಸಿಕಂಡ್ ಹೊರಟತ್. ಮುನ್ನೂರು ರೂಪಾಯಿಗೆ ಒಂದ್ ಜೀಪ್ ಬೇರೆ ಮಾಡ್ತ್. ಹೆಂಗಿದ್ರು ಕಾಫಿ ಮಾರ್ದ ದುಡ್ಡ್ ಇತ್ತಲ್ಲ.

ಜೀಪ್ ಹತ್ತಿ ಗೂಡೆನ ಮನೆಗೆ ಹೋಗಿ ತಲ್ಪಿಕಾಕನ ನಮ್ಮ ಕುಂಡೆ ಹಣ್ಣಾಗಿತ್ತ್. ಅರ್ಧ ಗಂಟೆಲಿ ವಾಪಸ್‌ಬಂದವೆ ತ ಹೇಳಿ ಜೀಪ್ ಡ್ರೈವರ್‌ಗೆ ಹೇಳಿ ಗೂಡೆನ ಮನೆ ಕಡೆ ನಡ್ದೊ. ಅಲ್ಲೆ ಜಗ್ಲಿ ಮೇಲೆ ಒಂದ್ ನಾಯಿ ಮಲ್ಗಿತ್ತ್. ಅದ್ ನಮ್ಮ ನೋಡ್‌ದಂಗೆ ಕಾಯಿಂಕ್ ತ ಹೇಳಿ ಅಲ್ಲಿಂದ ಎದ್ದ್ ಒಂದೇ ಓಟ ಒಡ್ತ್ ಆಗ ಒಳಗೆಂದ ಯಾರ್ ಬಂದೊಳ್ದು ? ತ ಯಾರೋ ಹೆಣ್ಣ್ ಜನ ಕೇಳ್ದೊ. ನಾವ್ ಹಿಂಗಿಂಗೆ ನೆಂಟ್ರ ಕ ಯಿಂದ ಬಂದದ್ ತ ಹೇಳಿಕಂಡ್ ನಾವು ಮನೆಯೊಳಗೆ ನುಗ್ಗಿದೊ. ಅಲ್ಲಿ ನೋಡ್ರೆ ರಾಜನ ಪೊರ್ಲ್‌ನ ಗೂಡೆ ವ್ಹೀಲ್ ಚೇರ್‌ಲಿ ಕುದ್ದುಟ್ಟು. ಅದ್ಕೆ ಒಂದ್ ಕಾಲ್ ಇಲ್ಲೆ. ಇದರ ನೋಡ್ದಂಗೆ ರಾಜಂಗೆ ಬೋದ ತಪ್ಪಿತ್. ನಾನ್ ಅವನ ಸುದಾರ್ಸಿ, ತಂದ ತಿಂಡಿನ ಅಲ್ಲಿ ಮಡ್ಗಿ ಮೆಲ್ಲೆ ರಾಜನ ಕರ್ಕಂಡ್ ಹೊರ್ಟೆ. ಗೂಡೆ ಮನೆಲಿ ಯಾರೂ ಇಲ್ಲೆ, ಎಲ್ಲವು ಗದ್ದೆ ಕಡೆ ಹೋಗೊಳೊ, ಈಗ ಬಾಕೆ ಆತ್ ಇರಿ ತ ಸುಮಾರ್ ಹಠ ಮಾಡ್ತ್. ನಾವ್ ಪುನಃ ಒಮ್ಮೆ ಬಂದವೆ ತ ಹೇಳಿ ಜಾಗ ಖಾಲಿ ಮಾಡ್ದೊ.

ಈಗ ರಾಜ ಯಾರೊಟ್ಟೆಗೂ ಸರಿಯಾಗಿ ಮಾತಾಡ್ತಾ ಇಲ್ಲೆ. ಯಾಗೊಳು ವರಿಸ್ ಹಿಡ್ದವರಂಗೆ ಸುಮ್ಮನೆ ಕುದ್ದ್ ಕಂಡ್ ಇದ್ದದೆ. ಆ ಗೂಡೆನ ಮದ್ವೆ ಆಗಿ ನನ್ನ ಕೋಳಿ ಅಂಗಡಿ ಒಟ್ಟಿಗೆನೇ ಒಂದು ಕುರಿಮಾಸದ ಅಂಗಡಿ ಹಾಕಿನೆ ತ ನಿನ್ನೆ ಹೇಳ್ತಿತ್ತ್. ಇಂದ್ ಬೆಳ್ಗೆ ಸಿಕ್ಕಿದಂವ ಅಪ್ಪನ, ತೋಟನ ನೋಡಿಕಣಿಕೆ ಬೇರೆ ಗೂಡೆನ ನೋಡ್ನೆ. ಆ ಗೂಡೆ ಬೇಡ ತ ಹೇಳ್ತಿತ್ತ್. ಈ ಯೋಚ್ನೆಲೆ ಅಂವ ಲಾಚಾರ್ ಆಗುಟ್ಟು. ಗೂಡೆನ ಕಡೆಯವು ಪಾಪಣಿ ಬಾವನ ಕೈಲಿ ಎರಡ್ಮೂರ್ ಸಲ ಹೇಳಿ ಕಳ್ಸಿದ್ದೊ. ಇಂವ ಯಂತಾರೊಂದ್ ಕಾರಣ ಹೇಳಿ ಮುಂದಕ್ಕೆ ಹಾಕ್ತಾವುಟ್ಟು. ನಂಗಂತು ಅಂವನ ಸಮಾಧಾನ ಮಾಡಿಕೆ ಆಗ್ತಾ ಇಲ್ಲೆ. ನೀವ್ಯಾರಾರ್ ಬಂದ್ ಸ್ವಲ್ಪ ಸಹಾಯ ಮಾಡಿ. ಜೀವನಲಿ ಒಂದೇ ಸರ್ತಿ ಮದ್ವೆ ಆಕೆ ಆದು. ಅದರ್‌ಂದ ಸ್ವಲ್ಪ ನಿಧಾನಲಿ ತಿಳ್ದ್ ಮಾಡಿಕಣಿ, ರಾಜನಂಗೆ ಯಾರೂ ಆಗ್ಬಡಿ ಆತಾ.

---

## ಸೂ ಚ ನೆ

**ಪ್ರಿಯ ಚಂದದಾರರೆ/ಓದುಗರೆ/ಹಾಗೂ ಉತ್ಸಾಹಿ ಯುವ ಲೇಖಕ/ಲೇಖಕಿಯರೆ,**

ಈಗಾಗಲೇ ಕೇಂದ್ರ ಸರ್ಕಾರ ಅಂಚೆ ಚೀಟಿಯ ಬೆಲೆಯನ್ನು ಏರಿಸಿರುವುದು ನಿಮಗೆ ತಿಳಿದಿದೆ. ಆದರೂ ಕೆಲವೊಂದು ಪತ್ರಗಳು ಸರಿಯಾದ ಅಂಚೆ ಚೀಟಿ ಲಗತ್ತಿಸದೆ ಬರುತ್ತಿವೆ. ಇನ್ನು ಮುಂದಕ್ಕೆ ಈ ರೀತಿಯಾಗದಂತೆ ಸರಿಯಾದ ಅಂಚೆ ಚೀಟಿಯನ್ನು ಲಗತ್ತಿಸಬೇಕಾಗಿ ವಿನಂತಿ. ಸರಿಯಾದ ಅಂಚೆ ಚೀಟಿಯನ್ನು ಲಗತ್ತಿಸದ ಪತ್ರಗಳನ್ನು ಸ್ವೀಕರಿಸಲಾಗುವುದಿಲ್ಲ.

—ಸಂ

## ಧಾರವಾಹಿ-12

ಮೂಲಕಥೆ : ಅಶ್ವಥಿ ಅರವಿಂದ್
ಅರೆಭಾಷೆಗೆ : ಎಂ.ಇ. ಮಹಮ್ಮದ್

# ಕರಿ ಚಿನ್ನ

ಅಷ್ಟರ್‌ಲಿ ರಂಜನ್ ಹೆದ್ರಿ ನಡಿಗಿಕಂಡ್ ಹೇಳ್ತ್.

'ಪ್ಲೀಸ್ ಮಾದಯ್ಯ ನನ್ನ ಕೊಲ್ಲ್ ಬಡ, ನಿಂಗೆ ಕೈಮುಗ್ಗನೆ, ದಯವಿಟ್ಟು ನನ್ನ ಉಳ್ಸ್.'

ಮಾದಯ್ಯ ಜೋಬ್‌ಲಿ ಇದ್ದ ಸ್ಪ್ರಿಂಗ್ ಚಾಕ್‌ನ ಹೊರಗೆ ತೆಗ್ತ್. ಆ ಚಾಕ್‌ನ ಹರ್ತ ಕಂಡ ರಂಜನ್ ಬೆವ್‌ರಿ ಹೋತ್.

'ದಮ್ಮಯ್ಯ ನನ್ನ ಕೊಂದ್‌ಬುಡ್ಬಡ. ನಾನ್ ಗೌರನ ಮದ್ವೆ ಮಾಡಿಕಂಡನೆ',

ತಾನೇ ಒಬ್ಬ ಧೀರಾಂತ ಕೊಚ್ಚಿಕಂಡ್ ಇದ್ದ ಆ ಕುಬೇರನ ಮಜ ಮರ್ಡಿಕೆ ಸುರ್ ಮಾಡ್ತ್.

'ಏ ಕಳ್ಳ ಬಡ್ಡಿ ಮಜ, ನಿನ್ನ ಮಾಸ ಕೊಚ್ಚಿದಂಗೆ ಕೊಚ್ಚಿ ಮೀನಿಗೆ ಮೇಚಿ ಹಾಕಿಬುಟ್ಟನೆ ಹುಷಾರ್. ಅಷ್ಟ್ ಧೈರ್ಯ ನಂಗೆ ಉಟ್ಟುರಾ. ಆದರೆ ಆ ನಾಡ್‌ಕೊಲ್ಲಿ ಮಾದಪ್ಪನ ಮಗ್ಳು ಗೌರ ಹೆರುವ ಕೂಸಿಗೆ ಅಪ್ಪ ಇಲ್ಲದಾದೆಲ್ಲಾಂತ ನಿನ್ನ ಬುಡ್ತ ಒಳೆ. ಅಷ್ಟೇ ಅಲ್ಲ ಬೋರ್‌ಗುಡ್ಡೆ ದೇವಯ್ಯನಲ್ಲಿ ಗೈದ್ ಜೀವನ ಮಾಡ್‌ದಕ್ಕೆ ನಾನ್ ನಿಂಗೆ ಒಂದ್ ರಿಯಾಯಿತಿ ಕೊಡ್ತಾ ಒಳೆ. ಒಂದ್ ವಿಷಯ ಮಾತ್ರ ಗ್ಯಾನ ಇಟ್ಕೆ. ಗೌರ ನನ್ನ ತಂಗೆನ ಹಂಗೆ ಇರವ್ಳು. ಆದಸ್ಟ್ ಬೇಗ ನೀನ್ ಅವಳ್ನ ಮೊದ್ವೆ ಮಾಡಿಕಣಕು. ನಿನ್ನ ಅಪ್ಪಂಗೆ ಹೇಳಿ ಐ.ಜಿ.ಪಿ.ಗೋ, ಹೋಂ ಮಿನಿಸ್ಟರ್ ಗೋ ಪುಕಾರ್ ಕೊಟ್ಟ್ ನನ್ನ ಅರೆಸ್ಟ್ ಗಿರೆಸ್ಟ್ ಮಾಡ್ಸಿಕೆ ಪೇಚಾಡ್ರೆ ನಿನ್ನ ಬೋಟೆ ತೆಗ್ದ್ ಬುಟ್ಟನೆ. ಅದ್ನ ಮಾತ್ರ ಚನ್ನಾಗಿ ಗ್ಯಾನ ಇಟ್ಕೆ.

ಚಾಕ್‌ನ ಮೊಡ್‌ಚಿ ಜೋಬ್‌ಲಿ ಹಾಕಂಡ್ ಮಾದಯ್ಯ ಅಲ್ಲಿಂದಹೊರಟತ್

ರಂಜನ್‌ನ ತಮ್ಮ ಜೀವನ್‌ನ ಒಮ್ಮೆ ಕಂಡ್ ವಿಷ್ಯ ಹೇಳಿ ಹೋನೆತ ಗ್ಯಾನ ಮಾಡ್ದ ಮಾದಯ್ಯ ಸೀದ ಜೀವನ್ ಇದ್ದ ಕಾಲೇಜಿಗೆ ಹೋತ್.

ಜೀವನ್ ರಂಜನ್‌ನಂಗೆ ಅಲ್ಲ. ಬೋರ್ ಗುಡ್ಡೆ ದೇವಯ್ಯನ ಕುದ್ಮನ ಬುದ್ಧಿ ಜೀವನ್‌ಗೆ ಇಲ್ಲೆ ಅಂವ ಅವ್ವ ಮುತ್ತಕ್ಕಿ ನಂಗೆ ಒಳ್ಳೆ ಸ್ವಭಾವದಂವ. ಕೆಲವೆಲ್ಲ ಪಬ್ಲಿಕ್ ಮೀಟಿಂಗ್‌ಲಿ ಅಂವ ಭಾಷಣ ಮಾಡಿಟ್ಟು. ಅಂತ ಸಂದರ್ಭಲಿ ಫ್ಯಾಕ್ಟ್ ಮಾದಯ್ಯ ಜೀವನ್‌ಗೆ ಹೂಹಾರ ಹಾಕಿದ್ದ್ ಸನ ಉಟ್ಟು.

ಮಾದಯ್ಯನ ಕಾಂಬಕನ ಜೀವನ್ ಕೇಳ್ತ್.

'ಏನ್ ವಿಶೇಷ ಮಾದಣ್ಣ ?'

ಒಂದ್ ವಿಚಾರ ಹೇಳಿಕ್ಕಿತ್ತ್. ಸೀಕ್ರೆಟ್ ಮ್ಯಾಟರ್, ಸೊಲ್ಪ ಅತ್ತ ಪೋಯ ?

ಕಾಲೇಜ್ ಕ್ಯಾಂಪಸ್‌ದ್ ಒಂದ್ ಮರದ ನೆರಳ್‌ಲಿ ನಿತ್ತ್‌ಕಂಡ್ ಅವು ಮಾತಾಡ್ದೊ. ರಂಜನ್ ಗೌರಂಗೆ ಮಾಡ್ದ ಅನ್ಯಾಯನ ಮಾದಯ್ಯ ಜೀವನ್‌ನೊಟ್ಟಿಗೆ ಹೇಳ್ತ್.

'ನೀನ್ ಒಂದ್ ಡಿಗ್ರಿ ಕಲಿವ ಸ್ಟೂಡೆಂಟ್ ತಾನೆ ? ಸೊಲ್ಪ ಗ್ಯಾನ ಮಾಡಿ ನೋಡ್. ನಿನ್ನ ಅಣ್ಣ ಮಾಡ್ದ ಕೆಲ್ಸ. ನಿಂಗೆ ಒಬ್ಬಳು ತಂಗಿ ಇದ್ದ್ ಈ ತರ ಅನ್ಯಾಯ ಅವಳಿಗೆ ಬೇರೆ ಯಾರಾರ್ ಮಾಡ್ರೆ ಅದ್ಕೆ ಕಾರಣನಾದಂವನ ನೀನ್ ಈ ಭೂಮಿ ಮೇಲೆ ಸುಮ್ನೆ ಬುಡ್ತಿದ್ದ ಹೇಳ್ ?'

ಮಾದಯ್ಯ ಕೇಳ್ತ್.

'ಸರಿ ಮಾದಣ್ಣ, ನೀನ್ ಈಗ ಹೋಗು, ನಾನ್ ಡ್ಯಾಡಿನೊಟ್ಟಿಗೆ ಈ ವಿಚಾರ ಹೇಳಿ ನೋಡ್ನೆ. ರಂಜನ್‌ನೂ ಮೀಟ್ ಮಾಡ್ನೆ '

ಮಾದಯ್ಯ ಸೆಕೆಂಡ್ ಕೊಟ್ಟ್ ಅಲ್ಲಿಂದ ಹೋತ್.

* * *

ಮಾದಯ್ಯನ ಕೈಯಿಂದ ಬಲವಾಗಿ ಪೆಟ್ಟ್ ತಿಂದ ರಂಜನ್ ಮನ್ಸ್‌ಲೇ ಹಗೆ ಇಟ್ಟ್ ಕಂಡತ್. ನಡ್ದ ವಿಷ್ಯನೆಲ್ಲ ಮನ್ಸಲೇ ಗ್ಯಾನ ಮಾಡ್ತ್. ಅಂವ ಮನೆಗೆ ಬಾತ್.

ಮಾದಯ್ಯ ಕೊಟ್ಟ ಮಾತ್‌ನಂಗೆ ನಡಿಯೊಕಾ ಅಲ್ಲ ಅವನ ಮಾತ್ ಮೀರಿ ನಡಿಯೋಕಾಂತ ಅವಂಗೆ ತಿಳಿಯದೆಹೋತ್ ನಂಗೆ ಡ್ಯಾಡಿದ್ ಸಪೋರ್ಟ್ ಸಿಕ್ಕಿದೆ, ತೊಂದರೆ ಇಲ್ಲೆ. ಗೂಂಡಗಳ ಬುಟ್ಟ್ ಆ ಮಾದಯ್ಯನ ಸೊಂಟ ಮುರ್ಸಿರೆ ಹೆಂಗೆ ? ಅಂವ ಗ್ಯಾನ ಮಾಡ್ತ್.

ಫ್ಯಾಕ್ಟ್ ಮಾದಯ್ಯ ಒಬ್ಬ ವ್ಯಕ್ತಿ ಮಾತ್ರ ಅಲ್ಲ. ಶಕ್ತಿ ಕೂಡ ಆಗಿತ್ತ್. ಊರ್‌ನ ಪೌರಸಮಿತಿದ್ ಅಧ್ಯಕ್ಷ ಅವನೇ. ಎಲ್ಲ ರಾಜಕೀಯ ಪಾರ್ಟಿನ ಜನಗಳಿಗೂ

ಕಳ್ದ ಸಂಚಿಕೇಲಿ ...

ಮಾದಯ್ಯ ದೇವಯ್ಯನ ಮನೆಲಿ ಮಾತಾಡ್ದ ವಿಷ್ಯ ಕೇಳಿ, ದೇವಯ್ಯನ ಹೆಣ್ಣ್ ಮುತ್ತಕ್ಕಿ ಗಂಡನೊಟ್ಟಿಗೆ ಗೌರನ ರಂಜನ್‌ಗೆ ಮೊದ್ವೆ ಮಾಡಿಕಣ್ನೊ ತೇಳ್ದ್. ಆಗ ದೇವಯ್ಯ ಸಿಟ್ಟ್‌ಲಿ ನನ್ನ ಮಜಂಗೆ ಮಿನಿಸ್ಟ್ರ ಮಗಳ್ನ ತರಕು ತ ಒಳೆ. ನೀ ಬಾಯಿ ಮುಚ್ಚಿ ಕುದ್ರು. ಹಿಂಗೆ ಗಂಡಂಗೆ ಹೆಣ್ಣ್‌ಗೆ ಮಾತಿಗೆ ಮಾತ್ ಬೆಳ್ದದೆ. ಇತ್ತ ಮಾದಯ್ಯ ರಂಜನ್ ಇದ್ದ ಲಾಡ್ಜ್‌ಗೆ ಬಂದ್ ರಂಜನ್ ಮಾಡ್ದ ತಪ್ಪಿನ ಹೇಳ್ಕಕನ ಇಬ್ಬರಿಗೂ ಜಗಳ ನಡ್ದ್ ಮಾದಯ್ಯ ರಂಜನ್‌ಗೆ ಎರ್ಡ್ ಬುಟ್ಟದ.

ಮುಂದೆ ಓದಿ ...........

ಬೇಕಾದಂವ. ಕೃಷಿಕರ ಕಣ್ಮಣೀಂತಲೇ ಹೇಳಕ್. ಅಂವ ನಾಡ್‌ಕೊಲ್ಲಿ ಮಾದಪ್ಪನ ಪರ ನಿತ್ತದೇಂತ ರಂಜನ್ ಕನ್ಸಲಿಸನ ಗ್ಯಾನ ಮಾಡಿತ್ತ್‌ಲೆ.

ರಂಜನ್ ಮನೆಗೆ ತಲಪಿತ್. ಜೀಪ್‌ನ ಶೆಡ್ಡ್‌ಲಿ ನಿಲ್ಸಿ, ಕೀ ಬಂಚ್‌ನ ಬೆರಳ್ ತುದಿಗೆ ಸಿಕ್ಸಿಕಂಡ್ ತಿರಿಗ್ಸಿಕಂಡ್ ಒಂದೂ ಗೊತ್ತಿಲ್ಲದವರಂಗೆ ಅಂವ ಒಳಗೆ ನಡ್ತ್.

'ನಿಲ್ಲ್‌ರಾ ಅಲ್ಲಿ..."

ದೇವಯ್ಯನ ಸ್ವರಕೇಳಿ ರಂಜನ್ ಕಲ್ಲ್ ನಂಗೆ ಅಲ್ಲೇ ನಿತ್ತತ್.

'ಎಲ್ಲಿಗೆ ಹೋಗಿದ್ದರಾ ಪೊರ್ಕಿ ?

'ಫ್ರೆಂಡ್ ಮೊದ್ವೆಗೇಂತ ಹೇಳಿದ್ದೆಲ್ಲ ಡ್ಯಾಡೀ ? ನಿನ್ನಕ್ಕಲೆ ಹೇಳಿ ತಾನೆ ನಾನ್ ಹೋದ್ದ್.

'ಥೂ.. ಹಲ್ಕಾ ಸೂ ಮಜ... ನೀನ್ ಆ ನಾಡ್‌ಕೊಲ್ಲಿ ಮಾದಪ್ಪನ ಗೂಡೆನ ಕರ್ಕಂಡ್ ಲಾಡ್ಜ್‌ಗೆ ಹೋತ್ಲೆರಾ ? ಆ ಸೂಳೆ ಅಲ್ದೆ ನಿಂಗೆ ಬೇರೆ ಯಾರೂ ಸಿಕ್ಕೆತ್ಲೆನಾ ? ಒಂದ್ ಮಂತ್ರಿರ್ದ್ ಮಗಳ್ನ ನೋಡೊಕೂಂತ ನಾನ್ ಇರ್‌ಕಾಕನ ನಿನ್ನ ಬಾಯಿಗೆ...'

'ಆ ಗೌರ ನನ್ನ ಕೈಯಿಂದ ದುಡ್ಡ್ ಕೇಳ್ಕಣ್‌ತಿತ್ತ್ ಡ್ಯಾಡಿ. ಕೊಟ್ಟ ದುಡ್ಡ್ ಸಿಕ್ಕದೇ ಇರ್‍ಕನ ನಾನ್ ಅವಳ್ನ ಕರ್ದೆ. ಆದರೆ ಇಷ್ಟೆಲ್ಲ ರಂಪ ಆದೇತ ನಾನ್ ಗ್ಯಾನ ಮಾಡಿತ್ತ್‌ಲೆ. ಸಾರಿ ಡ್ಯಾಡಿ,'

* * *

'ರಂಜೂ...'

ಅಪ್ಪ ದೇವಯ್ಯ ಕರ್ತ್.

'ಆದ್ದ್ ಆತ್, ಇನ್ನ್ ಮುಂದೆ ನೀನ್ ಆ ಗೂಡೆರ್ದ್ ಮೊಕ ನೋಡಿಕೆ ಬೊತ್ತ್. ಅವಳೂ, ಅವಳ ತಂಗಿನೂ ಸೇರಿ ದುಡ್ಡ್ ಮಾಡಿಕೆ ಒಳ್ಳೆ ಪ್ರಾಯಕ್ಕೆ ಬಂದ ಹೈದಂಗಳ್ನ ಬಲೆಗೆ ಹಾಕಣಿಕೆ ಸುರ್ ಮಾಡಿಯೊಳೊ. ಸ್ವಲ್ಪ ಎಚ್ಚರಂದ ಇರ್ !!

'ಆತ್ ಡ್ಯಾಡಿ'

ಮಾರನೇ ದಿನ ಬೆಳಿಗ್ಗೆ ಬೋರ್‌ಗುಡ್ಡೆ ದೇವಯ್ಯ ನಾಡ್‌ಕೊಲ್ಲಿ ಮಾದಪ್ಪನ ಮನೆ ತನ್ನ ಮನೆಗೆ ಕಾಣದ ಹಂಗೆ ದೊಡ್ಡ ಕಾಂಪೌಂಡ್ ಗೋಡೆ ಕಟ್ಟಿಸಿತ್. ಒಂದೇ ದಿನಲಿ ಕಾಂಪೌಂಡ್ ಗೋಡೆ ಹತ್ತ್ ಅಡಿ ಎತ್ತರಕ್ಕೆ ಹೋತ್. ಎಲ್ಲಕೂ ದುಡ್ಡ್ ಉಟ್ಟಲ್ಲೆ.

ಅಂದ್ ರಾತ್ರಿ ಜೀವನ್ ಮನೆಗೆ ಬಾತ್. ಬೋರ್‌ಗುಡ್ಡೆ ದೇವಯ್ಯನ ಎಲ್ಲ ಕೆಲ್ಸದ ಆಳ್‌ಗಳೂ ಸಂದರ್ಭ ಬಂದರೆ ರೌಡಿಸಂ ತೋರ್ಸಿಕೆ ತಯಾರಾಗೆ ಇದ್ದವು.

ಅವರ ಪೈಕಿ ಕರಾಟೆ ಕಾಳು, ಸೈಕಲ್ ಉಸ್ಮಾನ್, ರೌಡಿ ಬಿದ್ದು ಇವು ಮೂರ್ ಜನ ರೌಡಿಗಳ ನಾಯಕರ್‌ಗಳಾಗಿದ್ದೊ.

ಬಸ್ ಇಳ್ದ ಜೀವನ್ ಸೀದ ತನ್ನ ಅಪ್ಪನ ಅಡ್ಮಿನಿಸ್ಟ್ರೇಶನ್ ಆಫೀಸ್‌ಗೆ ನಡ್ತ್.

'ಕಾಳೂ, ಡ್ಯಾಡಿ ಉಟ್ಟಾ ಅಲ್ಲ ಹೊರಗೆ ಎಲ್ಲಿಗಾರ್ ಹೋಗುಟ್ಟಾ ?'

ಜೀವನ್ ಕೇಳ್ತ್.

'ಉಟ್ಟ್ ಸಾರ್, ಐ.ಜಿ.ರ್ದ್ ಮಜ ನೊಟ್ಟೆಗೆ ಏನೋ ಮಾತಾಡ್ತಾ ಒಳೊ'.

[ಸಶೇಷ]

## ಅಂದ್...ಇಂದ್

ಅಂದ್ ಜೋಬ್‌ಲಿ
ದುಡ್ಡ್ ತಕಂಡ್ ಹೋದ್ರೆ
ಬ್ಯಾಗ್‌ಲಿ ಸಾಮಾನ್
ತರಕಾಯ್ತ್

ಇಂದ್ ಬ್ಯಾಗ್‌ಲಿ
ದುಡ್ಡ್ ತಕಂಡ್ ಹೋದ್ರೆ
ಜೋಬ್‌ಲಿ ಸಾಮಾನ್
ತಕಂಡ್ ಬಾಕಾದು.

## ನೆರೆಹೊರೆ

ನೆರೆಮನೆವು
ಒಮ್ಮೊಮ್ಮೆ
ಬಾರೀ ಹೊರೆ !
ಅದ್ಕಾಗಿ ಅದ್ರೆಸ್ರು
ನೆರೆಹೊರೆ!!

## ನಗೆ ಹನಿ

ಮಾಷ್ಟರ್ : 'ಶೀಲಾ, ನಿದ್ರೆಗೆ ವಿರುದ್ಧ ಪದವೇನುತ ಹೇಳ್ಯಾ ?'

ಶೀಲಾ : 'ಅನನಿದ್ರೆ ಸಾರ್ !'

○ ಗೀತಾ ಶ್ರೀ, ಮಡಿಕೇರಿ.

## ಒಳಗೆ ಸೇರ್ರೆ ಗುಂಡ್...

ಮಿಲ್ಟ್ರಿಲಿದ್ದ ಅಪ್ಪಣ್ಣು ಬಾರೀ ನಾಚಿಕೆ ಸ್ವಭಾವದಂವ. ಒಂದು ಸಲ ಒಂದು ದೊಡ್ಡ ಪಾರ್ಟಿಗಡ. ಎಲ್ಲಾ ಆಫೀಸರ್‌ಗ ಅವರ ಹೆಣ್ಣ್‌ಗಳ್ನ ಕರ್‍ಕಂಡ್ ಪಾರ್ಟಿಗೆ ಬಂದಿದ್ದೊ. ಉಂಡಾದ ಮ್ಯಾಲೆ ಕುಡ್ಯಾಟ ಡ್ಯಾನ್ಸಾಟ ಎಲ್ಲ ಇತ್ತ್. ಅಪ್ಪಣ್ಣು ಮಾತ್ರ ಯಾರೊಟ್ಟಗೂ ಸೇರದೆ ಮೂಲೆಲಿ ವಿಸ್ಕಿ ಹಿಗ್ಗಿಕ್ಕಂಡ್ ಕುದ್ದಿತ್ತ್. ಗುಂಡ್ ಒಳಗೆ ಹೋಗ್ತಾ ಇದ್ದಂಗೇ ಅಪ್ಪಣ್ಣುಗೆ ಎಲ್ಲಿಲ್ಲದ ಧೈರ್ಯ ಬಾತ್. ಅಂವ ಎದ್ದ್ ಜೂಂಗಿಕಂಡ್, ವಾಲಾಡಿಕಂಡ್ ಒಂದು ಪೊರ್ಲಾದ ಗೂಡೆನ ಹತ್ರ ಹೋಗಿ, 'ಡ್ಯಾನ್ಸ್...ಮಾಡ್ನೊ'ತ ಕೇಳ್ತ್. ಆ ಗೂಡೆ ಇವನ ನೋಡಿ ನೆಗಾಡಿಕಂಡ್ ಹೇಳ್ತ್—'ನಾನ್ ನಿನ್ನೊಟ್ಟಗೆ 3 ಕಾರಣಕ್ಕೆ ಡ್ಯಾನ್ಸ್ ಮಾಡುದ್ಲೆ, ಒಂದ್ ನೀನ್ ಓವರ್ ಆಗಿ ಕುಡ್ದೊಳ, ಎರಡ್ ಈಗ ಹಾಕಿದ ಮ್ಯೂಸಿಕ್ ನಮ್ಮ ರಾಷ್ಟ್ರಗೀತೆ, ಮೂರ್ನೆದಾಗಿ ನೀನ್ ಗ್ಯಾನ ಮಾಡ್ದಂಗೆ ನಾನ್ ಹೆಂಗ್‌ಸಲ್ಲ, ಗಂಡ್ಸ್.○

○ ಎಡಿಕೇರಿ ಸುದರ್ಶನ್,
ಬೆಂಗಳೂರು.

# ಮೊದಲನೇ ವರ್ಷದ ಪುಣ್ಯ ತಿಥಿಯ ಸ್ಮರಣೆ



ಜನನ :: 13-4-1943

ಮರಣ :: 25-9-1997

**ಕೆ. ಎಂ. ಚಂದ್ರಮ್ಮ**

ನೀವು ನಮ್ಮನ್ನು ಅಗಲಿ ಇಂದಿಗೆ ಒಂದು ವರ್ಷ ಸಂದರೂ ನಿಮ್ಮ ಸವಿನೆನಪುಗಳೊಂದಿಗೆ, ತಮ್ಮ ಆತ್ಮವು ಸದಾ ಚಿರಶಾಂತಿಯಿಂದ ಕೂಡಿರಲಿ ಎಂದು ಹಾರೈಸುತ್ತಿರುವ

**ಪತಿ ಎಂ. ರಾಮೇಗೌಡ :: ಮಕ್ಕಳು :: ಅಳಿಯಂದಿರು :: ಮತ್ತು ಮೊಮ್ಮಕ್ಕಳು**

**ವಿಳಾಸ :** 1019/ಎ, 9ನೇ ಮುಖ್ಯ ರಸ್ತೆ, 3ನೇ ಹಂತ, ಗೋಕುಲಂ ಮೈಸೂರು-570 002

---

**ಯಶಸ್ವಿಯಾಗಿ ನಡೆದುಬಂದ "ಕೊಡಗು ಸಂಗಾತಿ"ಗೆ**

## ನಮ್ಮ ಶುಭಾಶಯಗಳು

ಯಿಂದ,

| | | |
|---|---|---|
| ಶಂಕರನ | ಬೋಪಯ್ಯ | ಮನು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ [MUDA] |
| | ಭವಾನಿ | ಧನು |
| ಮಗ | ರಾಹುಲ್ | ವಿನು |
| | ಅನುರಾಧ | ಅನು |

**ಮತ್ತು ಮನೆಯವರಿಂದ**

**ವಿಳಾಸ ::** ಕಾಳಮ್ಮ ದೇವಸ್ಥಾನ ಎದುರು, ಹಿನಕಲ್ ಗ್ರಾಮ ಮತ್ತು ಅಂಚೆ, ಮೈಸೂರು-17

---

K.R.N.N. 240 10-01-96 TCI Kar. 09592

## ಬೇಕಾಗಿದ್ದಾರೆ

ಕೊಡಗು ಸಂಗಾತಿಯ ಮಡಿಕೇರಿ ಕಛೇರಿ ಮತ್ತು ಕ್ಷೇತ್ರ ನಿರ್ವಾಹಕ [Field Worker] ರಾಗಿ ಕೆಲಸ ನಿರ್ವಹಿಸಲು ದ್ವಿಚಕ್ರ ವಾಹನ ಚಾಲನೆ ಅನುಭವವಿರುವ, ಕನಿಷ್ಠ ಪಿ ಯು ಸಿ. ಓದಿರುವ ಯುವಕ/ಯುವತಿಯರು ಬೇಕಾಗಿದ್ದಾರೆ. ಆಸಕ್ತರು ಕೂಡಲೆ **"ಕೊಡಗು ಸಂಗಾತಿ"** ಕಛೇರಿಯನ್ನು ಪತ್ರದ ಮುಖೇನ ಸಂಪರ್ಕಿಸುವುದು.

**—ಸಂಪಾದಕಿ**

---

## ನವೀಕರಿಸಿಕೊಳ್ಳಲು ಮನವಿ

ಕುಶಾಲನಗರದ ಆಸುಪಾಸಿನ ಚಂದದಾರರು **"ಕೊಡಗು ಸಂಗಾತಿ"** ಪಾಕ್ಷಿಕ ಪತ್ರಿಕೆಯ ಸದಸ್ಯತ್ವವನ್ನು ಈ ತನಕ ನವೀಕರಿಸದೇ ಇದ್ದಲ್ಲಿ ಕುಶಾಲನಗರದ ಈ ಕೆಳಕಂಡ ವಿಳಾಸದಲ್ಲಿ ವ್ಯವಹರಿಸಬಹುದು.

**ಶ್ರೀ ಕುಂಭಗೌಡನ ಸೋಮಣ್ಣ,**
**ಮಯೂರ ಕೋಲ್ಡ್ ಸ್ಟೋರೇಜ್,**
**ಬಿ. ಎಂ. ರಸ್ತೆ, ಕುಶಾಲನಗರ ಕೊಡಗು.**

ಕೊಡಗಿನ ಚಂದದಾರರು **"ಕೊಡಗು ಸಂಗಾತಿ"** ಪಾಕ್ಷಿಕ ಪತ್ರಿಕೆಯ ಸದಸ್ಯತ್ವವನ್ನು ಈ ತನಕ ನವೀಕರಿಸದೇ ಇದ್ದಲ್ಲಿ ಮಡಿಕೇರಿಯ ಈ ಕೆಳಗಿನ ವಿಳಾಸದಲ್ಲಿ ವ್ಯವಹರಿಸಬಹುದು

**ಶ್ರೀ ನಂಗಾರು ಮಣಿ,**
**ನಂಗಾರ್ ಆಡಿಯೋ ವೀಡಿಯೋ,**
**ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,**
**ಚಿಕ್ಕಪೇಟೆ, ಮಡಿಕೇರಿ.**

**—ಸಂಪಾದಕಿ**

---

## ಪುಸ್ತಕ ದೊರೆಯುತ್ತದೆ

"ಯಾರ ಭೇಟಿ " ಮತ್ತು ಇತರ ಪ್ರಸಂಗಗಳು ಪುಸ್ತಕ ದೊರೆಯುವ ಸ್ಥಳ
**ಶ್ರೀ ಬಿ. ಆರ್. ಜೋಯಪ್ಪ,** ಉಪನ್ಯಾಸಕರು, ಮದೆ ಮಹದೇಶ್ವರ ಕಾಲೇಜು,
ಮದೆ ಅಂಚೆ, ಮಡಿಕೇರಿ ತಾ|| ಕೊಡಗು–571 201

Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA P. SHEELAMANI, No 35 1st Cross, 4th Block Near Divisional Telephone Office) Jayalakshmipuram, Mysore-570 012 Phone : 516771